ಪ್ರಕಟನೆ—೩

# ಕಲೋಪಾಸಕ

ಮತ್ತು

# ಇತರ ನೀಳ್ಗವಿತೆಗಳು

ವಿನಾಯಕ

೧೯೩೪

ಸಾಹಿತ್ಯ ಪ್ರಕಟನ ಮಂದಿರ
——— ಧಾರವಾಡ ———

# ಪ್ರಸ್ತಾವನೆ

## ಪೂರ್ವಾರ್ಧ

(ಶ್ರೀ ದ. ರಾ. ಬೇಂದ್ರೆಯವರು ಬರೆದುದು)

ನಮಗೆ ನೋಡುವ ಶಕ್ತಿಯು ಎಷ್ಟರಮಟ್ಟಿಗೆ ಇರುವದೊ ಆ ಮಟ್ಟಿಗೆ ನಮಗೆ ಕಾಣಿಸುವದು: ದೃಷ್ಟಿಯಂತೆ ಸೃಷ್ಟಿ. ಎತ್ತರದಲ್ಲಿರುವವನಿಗೆ ಕಾಣುವದು ಹೆಚ್ಚು, ಆದರೆ ಅಸ್ಪಷ್ಟವೂ ಹೆಚ್ಚು. ಕಣ್ಣಿಗೆ ಕಣ್ಣು ಕಾಣುವದಿಲ್ಲ ಎನ್ನುವಂತೆ ತೀರ ಹತ್ತಿರದ ಒಡವೆ ಕಾಣಲಾರದು; ಅದರಂತೆಯೆ ತೀರ ದೂರದ ಒಡವೆ. ಮುಗಿಲಂಥ ಅತಿ ದೊಡ್ಡ ವಸ್ತುವಿನಂತೆಯೆ ವಿದ್ಯುದಣುರೇಣುಗಳಂಥ ಅತಿ ಸಣ್ಣ ವಸ್ತುಗಳೂ ಕಾಣವು. ಮಾನವದೃಷ್ಟಿಯು ಸ್ವಾಭಾವಿಕವಾಗಿಯೇ ವಿಶ್ವಸೃಷ್ಟಿಯನ್ನು ತುತ್ತುಮಾಡಲರಿಯದ ಸಣ್ಣ ಬಾಯಿ. ಆದರೆ ಅವನ ಅಂತಃಪ್ರಜ್ಞೆಯ ಆವೇಶವು ಯಾವ ಸೃಷ್ಟಿಯನ್ನೂ ಮಿಕ್ಕಿ ನಿಲ್ಲುವ ಪೌರುಷವುಳ್ಳದ್ದು. ಅಂತೆಯೆ ಕನ್ನಡಿ ಕನ್ನಡಕ, ಸೂಕ್ಷ್ಮದರ್ಶಕ, ದೂರದರ್ಶಕಯಂತ್ರಗಳು, ತರ್ಕದೃಷ್ಟಿ ಯೋಗದೃಷ್ಟಿ.

ನಮಗೆ ಸಹಜವಾಗಿಯೇ ತೋರುವ ಸೃಷ್ಟಿಯ ವೈಶಾಲ್ಯವೂ ಅಷ್ಟಿಷ್ಟಲ್ಲ. ಚರ್ಮೇಂದ್ರಿಯಗಳಿಗೆ ಗೋಚರಿಸುವ ಮಹಾಭೌತಿಕ ಸೃಷ್ಟಿ; ಶಬ್ದಗಳಿಂದ ಸೂಚಿತವಾಗುವ ಸಾಹಿತ್ಯಸೃಷ್ಟಿ; ಮನಸ್ಸಿಗೇ ಹೊಳೆಯುವ ಕಲ್ಪನಾಸೃಷ್ಟಿ; ಚಿತ್ರಲೇಪಾದಿಗಳಲ್ಲಿ ಸುಳಿದಾಡುವ ಕಲಾಸೃಷ್ಟಿ; ದೃಗ್ಮಾತ್ರವಾಗಿ ಬಿದ್ದುಕೊಂಡ ಸುಪ್ತಜೀವದಿದಿರು ಸುಳಿದಾಡುವ ಸ್ವಪ್ನ

ಸೃಷ್ಟಿ; ರೋಗವೇ ಜೀವಕ್ಕೆ ಭಾಸವಾಗುವ ಮಂಕುಸೃಷ್ಟಿ; ನಮ್ಮ ಅಶಕ್ತ ದೃಷ್ಟಿಯನ್ನು ಕುಸಾಡಿಸುವ ಐಂದ್ರಜಾಲಿಕಸೃಷ್ಟಿ; ಸಾಮಾನ್ಯ ಜನರಿಗೂ ಅನುಭವಕ್ಕೆ ಬರುವ ಈ ಸೃಷ್ಟಿಗಳಲ್ಲದೆ ಸಿದ್ಧ ಸಾಧ್ಯವಾದ ಗಾಂಧರ್ವಸೃಷ್ಟಿ; ಋಷಿಗಳಿಗೆ ಮೈದೋರುವ ಸತ್ಯಸೃಷ್ಟಿ ಮೊದಲಾದವು ಗಳು ಇರುವವಂತೆ. ಅಂತೂ ಏನು, ನಮ್ಮ ದೃಷ್ಟಿಯಂತೆ ನಮ್ಮ ಸೃಷ್ಟಿ ಯಿರುವದಾದರೂ ನಮ್ಮ ಶಕ್ತಿಯಷ್ಟೆ ನಮಗೆ ದರ್ಶನವೆಂಬ ಮಾತೂ ಸುಳ್ಳಲ್ಲ.

ದರ್ಶನವು ಶಾಬ್ದಿಕ ವರ್ಣನೆಯನ್ನು ಪಡೆದು ಸಾಹಿತ್ಯರೂಪದಲ್ಲಿ ಸೇರುವದು. ಈ ವರ್ಣನೆಯಲ್ಲಿ ಕೀಳು-ಮೇಲು ತರಗತಿಗಳು ಇವೆ. ತೋರುವದಕ್ಕಿಂತ ಹೆಚ್ಚು ಕಾಣುವ ಹಾಗೆ ಮಾಡುವದು ಶಬ್ದದೊಳಗಿನ ಮಂತ್ರಶಕ್ತಿ-ದೃಕ್‌ಶಕ್ತಿಯನ್ನು ಜಾಗೃತಗೊಳಿಸುವ ಮಂತ್ರಶಕ್ತಿಯು ನಾಲಿಗೆಯಿಂದೊಡನುಡಿಯಬೇಕಾದರೆ ಅದಕ್ಕೆ ಸರಿಯಾದ ಪ್ರಜ್ಞೆಯು ಆಡುವವನಲ್ಲಿ ಬೇಕು. ಕಾಣಬೇಕೆಂಬ ಕುತೂಹಲಸಿದ್ಧ ನೋಡುವವನಲ್ಲಿ ಬೇಕು. ತೋರಿಸುವ ಹಾಗೂ ನೋಡಬಲ್ಲ ಪ್ರಜ್ಞೆಗಳೆರಡೂ ಪ್ರತಿಭೆಯ ಪ್ರಕಾರಗಳು. ಮೊದಲನೆಯವ ಕವಿ, ಎರಡನೆಯವ ಸಹೃದಯ.

೯। ಗೋಕಾಕರವರ ಸೀಳ್ಗವನಗಳನ್ನು ಒಂದು ಕನಸಿನಮಾಯೆ ಆವರಿಸಿಕೊಂಡಿದೆ. ಕನಸಿಗೆ ಕಾವ್ಯದಲ್ಲಿ ಎಡೆದೊರೆಯಬೇಕೇ, ಸಾಹಿತ್ಯ ದಲ್ಲಿ ಸ್ಥಾನವಿದೆಯೇ ಎಂಬ ಪ್ರಶ್ನೆಯೇ ಹುಟ್ಟಬಾರದು. ಮಾನವ ಸಾಮಾನ್ಯರಿಗೂ ತೆರೆದೊಟ್ಟಿದ ಸೃಷ್ಟಿಯದೊಂದು. ಬ್ಲೇಕ, ಕಾಲೆರಿಜ ಮೊದಲುಮಾಡಿಕೊಂಡು ಯೀಟ್ಸ, 'ಏ, ಈ' ಯವರ ವರೆಗೂ ಅನೇಕ ಕವಿಗಳು ತಮ್ಮ ಸಾಹಿತ್ಯರಂಗವನ್ನು ತಮ್ಮ ಸ್ವಪ್ನಗಳಿಗೆ ಒಡ್ಡಿದ್ದಾರೆ. ಅದರಿಂದ ಆಂಗ್ಲವಾಙ್ಮಯವು ಹೊಸ ಹಾದಿಯನ್ನೂ ಕಂಡಿದೆ. ನಮ್ಮ ಜೈನ ಚಂಪೂ ಕಾವ್ಯಗಳಲ್ಲಿಯೂ ಕನಸಿನ ಮಹತ್ವವಿಲ್ಲದ ಕಾವ್ಯವಿಲ್ಲ. ಕಾವ್ಯಸೃಷ್ಟಿಯೇ ಒಂದು ಬಗೆಯ ಶಾಬ್ದಿಕ ಸ್ವಪ್ನಸೃಷ್ಟಿಯಿದ್ದಂತೆ. ಇವೆರ ಡರಲ್ಲಿಯೂ ವಾಚ್ಯಕ್ಕಿಂತ ಧ್ವನಿಗೆ ಪ್ರಾಧಾನ್ಯ ಹೆಚ್ಚು. ಮನುಷ್ಯನ ಅಂತಃಪ್ರಜ್ಞೆಯನ್ನು ಎಚ್ಚರಿಸಿ, ಸುಳಿದಾಡಿಸುವದು ಅವೆರಡರ ಸೃಷ್ಟಿ

೭

ಪರಿಣಾಮ. ಯೋಗಿಗಳು ಹೇಳುವ ಋತಂಭರಪ್ರಜ್ಞೆಗೆ ಹಾದಿಮಾಡಿ ಕೊಡುವ ನವನವೋನ್ಮೇಷಶಾಲಿಯಾದ ಪ್ರತಿಭೆಯು ರಂಗಸ್ಥಳವು ಅವುಗಳಲ್ಲಿ ಇದೆ. ಈ ಪ್ರಾತಿಭದೃಷ್ಟಿಯನ್ನು ನೆಲೆಯಾಗಿಸುವದು ಇಂದಿನ ಸಾಹಿತ್ಯ ಸಂಸ್ಕಾರದ ಹೆಚ್ಚಿನ ಹವಣಿಕೆ. ಇದರಿಂದ ಪ್ರಜ್ಞೆಯು ಆಳವಾಗುವುದು, ಹರುವಾಗುವದು. Deepening of conciousness ಎಂದು ಇಂದಿನ ಆಂಗ್ಲಸಾಹಿತಿಗಳು ಈ ಕ್ರಮಕ್ಕೇ ಹೇಳುತ್ತಿರುವರು.

ಕವಿಯು ತನ್ನ ಕನಸನ್ನೆ ಹೇಳಲಿ ಮನಸನ್ನೆ ಮೂಡಿಸಲಿ ಅದು ರಸಿಕರ ಎದೆಯ ಒಳಹೊಗಬೇಕಲ್ಲವೇ? ಎಂದು ಕೇಳುವದು ಉಚಿತವಾದ ಪ್ರಶ್ನೆ. ತಮ್ಮ ಸುಖವೇ ಸುಖ; ತಮ್ಮ ದುಃಖವೇ ದುಃಖ; ತಮಗೆ ಕಂಡಿದ್ದೇ ನಿಜ ಎಂದು— ಹೆರವರದೆಂದರೆ ತನಗೆ ಹೊರತು ಎಂಬ ವಿಷಮಭಾವದಲ್ಲಿ ನಮ್ಮ ಅಹಂಕಾರದ ವ್ಯಾಪಾರವು ಸಾಗಿರುವದು. ಎಲ್ಲ ಕಲೆಯಂತೆ ಸಾಹಿತ್ಯವೂ ನಮ್ಮ ದೃಷ್ಟಿಯನ್ನು ತನ್ನ ಕಡೆಗೆ ಸೆಳೆದುಕೊಳ್ಳುವದು ಮೊದಲನೆಯ ಮೆಟ್ಟಲು; ತನ್ನನುಳಿದು ಉಳಿದುದನ್ನು ಮರೆತಂತೆ ಮಾಡುವದು ಎರಡನೆಯದು; ಇದಕ್ಕೆ ನಿವೃತ್ತಿ ಎನ್ನುವರು. ಭಾವುಕನ ಹೃದಯ ಕವಿಹೃದಯದೊಡನೆ ಒಂದಾಗುವಾಗ ಇವನ ವೈಷಮ್ಯವಳಿಯುವದು; ತಗ್ಗು ದಿನ್ನೆ ಹೋಗಿ ಮನಸ್ಸು ಕರಗಿ ಸೆಳೆದತ್ತ ಹರಿಯುವದು; ಇದಕ್ಕೆ ದ್ರುತಿ ಎನ್ನುವರು. ಆಗಿನ ಮಟ್ಟಿಗೆ ಅದು ಜೀವದರಿಕೆಯಾಗಿ ಪರಾಂತಃಕರಣ ಪ್ರವೇಶ ದೊರೆತ ಸತ್ತ್ವವು ಹಾಗೆ ಸಂಸ್ಕಾರರೂಪವಾಗಿ ನಿಲ್ಲುವದು; ಇದಕ್ಕೆ ವಿಶ್ರಾಂತಿ ಎನ್ನುವರು. ಈ ಮೂರು ಶಕ್ತಿಗಳು ಯಾವ ಸಾಹಿತ್ಯದಲ್ಲಿ ಹೆಚ್ಚೋ ಅದು ಹೆಚ್ಚಿನ ಸಾಹಿತ್ಯ. ಆ ಒರೆಗಲ್ಲಿನಲ್ಲಿ ಈ ನೀಳ್ಗವನಗಳ ಬಣ್ಣವೂ ತೋರಬೇಕು. ಅದು ಸಾಹಿತ್ಯಸಿದ್ಧಿ.

೨

ವೃತ್ತ ಧಾಟಿಗಳ ಹೆಸರು ಗೊತ್ತಿಲ್ಲದ್ದರಿಂದ ಕವನವನ್ನು ಹೇಳಲೇ ಬರುವದಿಲ್ಲವೆನ್ನುವ ಒಂದು ಪರಿಪಾಠದಂತೆ, ರೂಢಿಯ ರಸಭಾವಗಳನ್ನು ಕಾಣದೇ ತಾವು ಓದುವ ವಾಙ್ಮಯವು ಕಾವ್ಯವಹುದೋ ಅಲ್ಲವೋ ಎಂಬ ಸಂಶಯಾಕುಲಿತವಾಗುವ ಪ್ರವೃತ್ತಿಯೂ ಒಂದಿದೆ. ಗೆ। ಗೋಕಾಕರವರ

ಕವನಗಳಲ್ಲಿ ಒಡಮೂಡಿದುದು ರತಿಕೇಂದ್ರಿತವಾದ ಅಷ್ಟರಸ ಸೃಷ್ಟಿಯಲ್ಲ. ಹೀಗೆಂದಷ್ಟಕ್ಕೆ ಅಗವ್ಯತೆಯು ಆಕಾಂಕ್ಷೆಯು ಯಾವ ಬಗೆಯಲ್ಲಾದರೂ ಇಲ್ಲಿ ಇದೆ ಎಂದು ಹೇಳುವ ಇಚ್ಛೆಯಿಲ್ಲ ನನಗೆ. ಮಾನವನ ಸ್ಥಾಯಿಭಾವ ಗಳು ಎಂಟೆ ಇಲ್ಲ. ಈ ನೀಳ್ಗವನಗಳಲ್ಲಿ ಅವುಗಳ ಸುಳಿವೂ ಇದೆ. ಆದರೆ ಇಲ್ಲಿ ಪ್ರಾಧಾನ್ಯವಿರುವದು ಬೇರೆ ಭಾವಗಳಿಗೆ. ವಿಸ್ಮಯವು ಎಲ್ಲ ಕಥಾವಸ್ತುಗಳಲ್ಲಿಯೇ ತುಂಬಿವೆ; 'ಕಲೋಪಾಸಕ' 'ತೀರದ ದಾರಿ' 'ಸೆಳವು' ಗಳಲ್ಲಿ ಉತ್ಸಾಹಕ್ಕೆ ನೆಲೆಯಿದೆ. 'ಪತನ' 'ತಾಯವ್ವನ ಸಮಾಧಿ' ಗಳಲ್ಲಿ ಒಂದು ವಿಧದ ಕಾರುಣ್ಯವು ಹಬ್ಬಿಕೊಂಡಿದೆ. ಆದರೆ ಇವುಗಳಲ್ಲಿ ಸ್ಥಾಯಿಯಾಗಿರುವದು ಜೀವನದ ಜಿಜ್ಞಾಸೆ. ಕೂಸು ಮೊದಲು ಮಾಡಿಕೊಂಡು ಜ್ಞಾನಿಗಳವರೆಗೂ ಜಿಜ್ಞಾಸೆ–ತಿಳಿಯಬೇಕೆಂ ಬಾಸೆ–ತಪ್ಪಿಲ್ಲ. ಈ ತಿಳುವಳಿಕೆ ಬೇಕಾದುದು ಬರಿ ಬುದ್ಧಿಗಲ್ಲ. ಹೃದಯಕ್ಕೂ ಒಂದು ಮಹಾಜೀವನಸಂಸ್ಪರ್ಶದ ಅನುಭವಬೇಕು. ಆ ಸ್ಪರ್ಶಾನುಭವ ದಲ್ಲಿ ಒಂದು ವಿಶ್ರಾಂತಿಯಿದೆ. ಅದರ ಸಂಸ್ಮರಣದಲ್ಲಿ ಸುಖವಿದೆ. ಅದರ ವರ್ಣನೆಯಲ್ಲಿಯೂ ಒಂದು ಸಾಧನವಿದೆ. ಯುಕ್ತಚಿತ್ತದಿಂದಿದ್ದರೆ ಸಾಮಾನ್ಯರಿಗೂ ಇದರಲ್ಲಿ ಗಮ್ಯವಿದೆ.

ಹೊರಗಣ್ಣಿಗೆ ಕಾಣುವ ಸೃಷ್ಟಿಯು ಮೂಕವಾಗಿದೆ. ಒಳಗಣ್ಣಿ ಇದಿರು ಕುಣಿದಾಡುವ ಕನಸು ವಿಕ್ಷಿಪ್ತಸೃಷ್ಟಿಯಂತೆ ತೋರುವದು ಹೊಳೆಗಣ್ಣಿಗೆ ನಮ್ಮ ಸ್ವಂತದ ಕರ್ಮಜಾಲವೆಲ್ಲ ದೈವಲೀಲೆಯಾಗಿ ತೋರಿ ನಮ್ಮ ಎಚ್ಚರಿಕೆಯೂ ಗಾಢನಿದ್ರೆಯಂತೆ ಭಾಸವಾಗುವದು. ತಿಳಿಗಣ್ಣಿಗೆ ಎಲ್ಲ ಜೀವನವು ರಸಮಯವಾದ ನಾಟಕವಾಗಿ ಅನುಭವಕ್ಕೆ ಬರುವದು. ಈ ಚತುರ್ಮುಖವಾದ ಪ್ರಜ್ಞೆಯು ಎಲ್ಲರಿಗೂ ಇದೆ. ವಿವೇಕಿಸಿ ನೋಡಿದಾಗ ಎಂಥ ಮೂಢನಿಗೂ ಇದು ಹೊಳೆಯದೆ ಹೋಗುವ ದಿಲ್ಲ. ಬರಿ ಹೊಳೆದು ಫಲವಿಲ್ಲ, ಹೊಳೆಯಾಗಿ ಹೊಮ್ಮಬೇಕು. ಇಂದಿನ ಸಾಹಿತ್ಯವು ಆ ಹಂಚಿಕೆಯಲ್ಲಿದೆ. ಈ ಹವಣಿಕೆಯಲ್ಲಿ ಜೀವನವು ಸಮಸ್ಯೆ ಯಾಗಿ ಜಿಜ್ಞಾಸೆಯು ಹೆಚ್ಚಿದೆ; ಸಂಶಯ, ವಿಕಲ್ಪ, ಭ್ರಮೆ ಮೊದಲಾದ ಸಂಚಾರಿಭಾವಗಳು ಜಿಜ್ಞಾಸೆಗೆ ಪುಟಗೊಡುತ್ತಿವೆ.

'ಸೆಳವಿ' ನಲ್ಲಿ ದ್ವಿಧಾವೃತ್ತಿಯಲ್ಲಿ ಸುಳಿದು ಮಿಂಚುವ ಉತ್ಸಾಹ,

'ತೀರಥ ದಾರಿ'ಯು ಕೊನೆಗಾಣದ ರೀತಿಯಲ್ಲಿ ಅಚ್ಚಳಿಯದಿದ್ದ ಶ್ರದ್ಧೆ; 'ಪತನ'ದ ಅಶಕ್ತತೆಯಲ್ಲಿ ತಲೆಯೆತ್ತಿರುವ ಸಂಕಲ್ಪ ಇವು ಒಂದು ಜೀವನ ಪಥವನ್ನು ರೇಖಿಸಿದರೆ, 'ಕಲೋಪಾಸಕ' 'ತಾಯವ್ವನ ಸಮಾಧಿ'ಗಳಲ್ಲಿ ಅಪೂರ್ವಾನುಭವಕ್ಕೆ ನವೀನ ಜೀವನಬೇಕು– ಎಂದು ವರ್ಣನೆ ಇದೆ. 'ಕಲೋಪಾಸಕ'ನ ಮನದರಿಕೆಯಾದ ಕಣವರಿಕೆಯು ಜಿಜ್ಞಾಸೆಯಿಂದ ಜೀವನಕ್ಕೆ ಹೋಗುವದು; ತಾಯವ್ವನ ಕರುಣ ಸಿಂಚಿತ ವಾತ್ಸಲ್ಯವು ಒಳಹೊರಗಿನ ಪ್ರಕೃತಿಯು ಮುಚ್ಚಿದ ಕದಗಳನ್ನು ತೆರೆಯುವದು. ಆದರೆ ಎಲ್ಲ ಕವನಗಳಲ್ಲಿ 'ಜೀವನ' 'ಮಹಾಜೀವನ' ಎಂಬ ಕೂಗು, ಕನವರಿಕೆ, ಹುಂಬರೆಂದೆನಿಸಿಕೊಳ್ಳುವವರಲ್ಲಿಯೂ ಈ ಬಗೆಯ ಜಿಜ್ಞಾಸೆಯು ಹಾಳುಪಟ್ಟಣದಂತೆ ಹುಗಿದುಕೊಂಡಿದೆ. ಗತಿಸಿದ ಸಂಸ್ಕೃತಿಗಳು ಮಾನವಜಾತಿಗೆ ಕೊಟ್ಟ ವರವದು· ಮುಂದಿನ ದಿವ್ಯ ಜೀವನದಲ್ಲ ಜೀವನ ಜಿಜ್ಞಾಸೆಯೊಂದು ಸ್ಥಾಯಿಭಾವ.

ಮಹಾಶ್ವೇತೆಯ 'ಅಸುವಿನೊಲವು'ಯು ರತಿಯ ಜಾತಿಗೆ ಸೇರಿದುದಲ್ಲ. ಸ್ನೇಹಸ್ಥಾಯಿಭಾವವಾದ ಪ್ರೇಮರಸವದು. ಭವಭೂತಿ ಮೊದಲಾದವರು ಇದನ್ನು ಕಂಡಿದ್ದರು. ವೈಷ್ಣವ ಕವಿಗಳ 'ಮಧುರ' ಭಾವಕ್ಕೆ, ಶೈವರ 'ಸತಿಪತಿ' ಭಾವಕ್ಕೆ, ಹಳೆಯ ರತಿಯು ಸೆಕೆ ತಾಕದೆ ಹೋಗಲಿಲ್ಲ. ಸ್ವತಃ ರತಿಯೇ ವಾಚ್ಯವಲ್ಲ. ಸೂಚ್ಯವಾದಾಗ ಬೇರೆ ಮಿರುಗನ್ನು ಪಡೆಯುವದು. ಸ್ನೇಹವು ಪುರುಷ ಪ್ರಕೃತಿ ಭಾವದೊಂದು ನೆಲೆ. ಮೈತ್ರಿಯ ಒಂದು ವಿಧಾನ.

ಮೇಲಿನಂತೆ ಬರೆಯುವದೆಂದರೆ ಸಣ್ಣ ವಿಚಾರಗಳನ್ನು ದೊಡ್ಡ ಶಬ್ದಗಳಲ್ಲಿ ತುಂಬಲು ಹವಣಿಸಿದಂತೆ ಎಂದು ಆಪಾತತಃ ಕಾಣಬಹುದು. ಆದರೆ ದೊಡ್ಡ ಶಬ್ದಗಳಲ್ಲಿ ಸೂಚಿತವಾಗುವ ಬಗೆಯು ಸಣ್ಣದೆಂದು ತೋರುವ ಜೀವನದಲ್ಲಿ ಹೇಗೆ ಮಿಂಚಿ ಮಾಯವಾಗುತ್ತಿದೆ, ಅದನ್ನು ನೆಲೆಗೆ ತರಬೇಕಾದ ಅಗತ್ಯವೆಷ್ಟಿದೆ, ಎಂಬುದೇ ಈ ದೀರ್ಘವಿವರಣೆಯ ಅಪೇಕ್ಷೆ.

ಪುಣೆ

೧೨–೧೧–೩೪

# ನನ್ನ ಮಾತುಗಳು

## ಉತ್ತರಾರ್ಧ

### ೧

ಇಲ್ಲಿಯ ಕವಿತೆಗಳನ್ನು ನಾನು ನೀಳ್ಗವಿತೆಗಳೆಂದು ಕರೆದಿದ್ದೇನೆ.ಅದಕ್ಕೆ ಕಾರಣವಾದರೂ ಇದೆ. ಪ್ರತಿಯೊಂದು ಕವಿತೆಯೂ ಒಂದು ಸ್ವತಂತ್ರವಾದ ಭಾವನೆಯ ಸುತ್ತು ಬೆಳೆದ ಬಂದ ದೇಹವೆನ್ನಬಹುದು. ಯಥಾವತ್ತಾಗಿ ಈ ಭಾವನೆಯನ್ನು ನಿರೂಪಿಸಿದರೆ ಕವಿತೆಯು ಒಂದು ವೈಣಿಕ ಗೀತೆಯಾಗುವದು. ಆದರೆ ಭಾವನೆಯು ಸ್ವತಂತ್ರವಾಗುಳಿದರೂ ಅದು ಮನಸ್ಸಿನಲ್ಲಿ ಹೆಚ್ಚಾಗಿ ಹಿಂಪಿಸುವಂತೆ ಮಾಡಲು ಅನೇಕ ಹಾದಿಗಳಿವೆ. ಭಾವನೆಯನ್ನು ಸರಳವಾಗಿ (ಅಲಂಕಾರಯುಕ್ತವಾಗಿದ್ದರೂ) ನಿರೂಪಿಸದೆ ಅದನ್ನು ಒಂದು ಕಥೆಯೊಳಗಿಂದ ಹಾಯಿಸಿ ತರಬಹುದು; ದೃಶ್ಯರೂಪವಾಗಿ ಅದನ್ನು ಚಿತ್ರಿಸಬಹುದು; ಇಲ್ಲವೆ ಅದಕ್ಕೆ ವಿಚಾರಗಳ ಬೆಂಬಲವನ್ನು ಕೊಡಬಹುದು. ಇವರಲ್ಲಿಯ ಯಾವ ರೀತಿಯನ್ನು ಅನುಸರಿಸಿದರೂ ಕವಿತೆಯು ನೀಳ್ಗವಿತೆಯಾಗುವದು. **'ಸೆಳವಿ'**ನಲ್ಲಿಯ ಸಂವಾದ ವಿಧಾನ (ದೃಶ್ಯದ ಒಂದು ರೀತಿ) ಹಾಗು ವಿಚಾರಸರಣಿ; **'ಪತನ'**ದಲ್ಲಿಯ ವಿಚಾರಸರಣಿ ಹಾಗು ದೃಶ್ಯರೂಪ; **'ತೀರದ ದಾರಿ'**ಯಲ್ಲಿಯ ದೃಶ್ಯಮಯತೆ; **'ಮಹಾಶ್ವೇತೆ'**ಯಲ್ಲಿರುವ ನಾಟಕದ ಹೊಳಹು; **'ತಾಯುಮ್ಮನ ಸಮಾಧಿ'** ಯಲ್ಲಿಯ ಕಥೆ; ಹಾಗು **'ಕಲೋಪಾಸಕ'**ದಲ್ಲಿಯ ಕಥೆ, ವಿಚಾರಸರಣಿ, ಮತ್ತು ಸಂವಾದ ಕ್ರಮಗಳು,–ಇವೆಲ್ಲ ಆಯಾ ಕವಿತೆಯನ್ನು ನೀಳ್ಗವಿತೆಯನ್ನಾಗಿ ಮಾಡಿದ ಅಂಗಗಳು.

ಆದರೆ ಒಂದು ಅಂಗವಾಗಿ ಬಂದ ಕ್ರಮವು ಸರ್ವಾಂಗವನ್ನು ವ್ಯಾಪಿಸಿದರೆ ಕವಿತೆಯು ನೀಳ್ಗವಿತೆಯಾಗುವದಿಲ್ಲ; ಅದೊಂದು ಪದ್ಯಕಥೆ (Narrative poem) ಪದ್ಯಪ್ರಬಂಧ (Argument in verse) ಇಲ್ಲವೆ ದೃಶ್ಯಕಾವ್ಯವಾಗಬಹುದು. ಈ ರೀತಿಯಾಗಿ ನೋಡಿದಲ್ಲಿ 'ಮಹಾಶ್ವೇತೆ'ಯನ್ನು ಒಂದು ನೀಳ್ಗವಿತೆಯೆಂದು ಕರೆಯುವದಕ್ಕಿಂತ ದೃಶ್ಯವೆಂದು ಕರೆದರೆ ಒಳ್ಳೆಯದಾಗಬಹುದು. ಈ ಮಾತು ಹೆಚ್ಚು ಕಡಿಮೆ '**ತೀರದ ದಾರಿ**'ಗೂ ಅನ್ವಯಿಸುವದು. ಇದೇ ದೃಷ್ಟಿಯಿಂದ '**ತಾಯವ್ವನ ಸಮಾಧಿ**' ಯು ಒಂದು ಪದ್ಯಕಥೆಯೆನ್ನಬಹುದು. ಆದರೆ ನನಗೆ ತೋರಿದಂತೆ ಈ ಕ್ರಮಗಳಿಗಿಂತ ಮೂಲಭಾವನೆಯೇ ಪ್ರತಿಯೊಂದು ಕೃತಿಯಲ್ಲಿ ಪ್ರಬಲವಾಗಿದ್ದರಿಂದ ಇವೆಲ್ಲವುಗಳನ್ನು ನೀಳ್ಗವಿತೆಗಳೆಂದು ಕರೆದಿದ್ದೇನೆ.

ಕಾವ್ಯಸ್ಫೂರ್ತಿಯು ಏಕಕಾಲದಲ್ಲಿ ಬಹಳ ಹೊತ್ತಿನ ವರೆಗೆ ಕೆಲಸ ಮಾಡಲಾರದು; ಕಾರಣ ಪ್ರತಿಯೊಂದು ನೀಳ್ಗವಿತೆಯೂ ಕೆಲವು ಲಘು ಗೀತೆಗಳ ಒಂದು ಮಾಲೆಯೆಂದು ವಿಮರ್ಶೆಯಲ್ಲಿ ಒಂದು ವಾದವಿದೆ. ಈ ವಾದಕ್ಕೆ '**ತಾಯವ್ವನ ಸಮಾಧಿ**' ಹಾಗೂ '**ಮಹಾಶ್ವೇತೆ**'ಯಲ್ಲಿ ಹೆಚ್ಚು ಆಸ್ಪದವು ಸಿಕ್ಕಬಹುದು. ಇದನ್ನು ನಾನು ಇಲ್ಲಿ ಚರ್ಚಿಸಬಯಸುವದಿಲ್ಲ. ಒಂದೇ ಮಟ್ಟಿನಲ್ಲಿ ನೂರು ನೀಳ್ಗವಿತೆಗಳನ್ನು ಬರೆಯಲು ಶಕ್ಯವಿದೆಯೆಂದು ಹೇಳಿ ಬಿಡಬಹುದು. ವಾದವನ್ನು ಒಪ್ಪಿದರೂ ಕೂಡ ನೀಳ್ಗವಿತೆಯ ರಚನಾಕ್ರಮಕ್ಕೆ ಯಾವ ಅಭ್ಯಂತರವೂ ಇಲ್ಲ. ಒಂದೇ ಒಂದು ಸ್ವತಂತ್ರ ಕಲ್ಪನೆಯು ಅಲ್ಲಿ ಪ್ರಧಾನವಾಗಿ ವಿರಾಜಮಾನವಾಗಿರುವತನಕ ಅದು ನೀಳ್ಗವಿತೆಯೇ.

೨

ಒಟ್ಟಾರೆ ಕಾವ್ಯದ ವಿಷಯಕ್ಕೆ ಇನ್ನು ಮಾತುಗಳನ್ನು ಹೇಳಬೇಕೆಂದು ನನಗೆ ತೋರುತ್ತದೆ. ಅನೇಕ ಮಧುರವಾದ ಅನುಭವವನ್ನು ಕವಿಯು ತನ್ನ ಅಂತರಂಗವು ತೆರೆದ ದಿಕ್ಕಿನಲ್ಲಿ ಪಡೆಯುತ್ತಾನೆ. ಜಾಗೃತಿ, ಸ್ವಪ್ನ, ಸುಷುಪ್ತಿ, ಸಮಾಧಿ,-ಇವೆಲ್ಲ ಅನುಭವದ ಲೋಕಗಳು. ಈ ನಾಲ್ಕು ಲೋಕಗಳಲ್ಲಿ ಯಾವುದರಲ್ಲಿಯೂ ಅನುಭವವನ್ನು ಪಡೆಯುವ ರೀತಿ-ಸಂದರ್ಭಗಳ ಸಂಖ್ಯೆಗೆ ಅಂತರವಿಲ್ಲ, ಪಾರವಿಲ್ಲ.

ಎರಡನೆಯ ಮಾತು: ಕವಿಯು ತನ್ನ ವಸ್ತುವನ್ನು ಪೋಷಿಸಬಂತೆಯೇ ಆರಿಸಿಕೊಳ್ಳಬಲ್ಲ. ಜಾಗೃತಸೃಷ್ಟಿಯುದೇ ಇರಲಿ, ಸ್ವಪ್ನಸೃಷ್ಟಿಯುದೇ ಇರಲಿ, ಆ ವಸ್ತುವು ಕವಿಯ ಅನುಭವದ ಪಾಕವಾದರೆ ತೀರಿತು. ಕವಿಯು ಒರ್ವ ವ್ಯಕ್ತಿಯಾದ್ದರಿಂದ ಅದು ಮಾನವ್ಯದ ಒಂದು ರೀತಿಯ ಅನುಭವದ ಪಾಕವೂ ಆಗುವದು. ಕವಿಯ ದೃಷ್ಟಿಯು ಅವನ ಅನುಭವದ ಸೀಮೆಯನ್ನು ನಿರ್ಣಯಿಸುವಂತೆ ಅವನ ಸಂಸ್ಕಾರ–ಸಂಸ್ಕೃತಿ–ಸಂದರ್ಭಗಳು ಕವಿಯು ವಸ್ತುವಿನ ಸ್ವರೂಪವನ್ನು ನಿರ್ಣಯಿಸುತ್ತವೆ.

ಮೂರನೆಯ ಮಾತು : ಅವನ ಕೃತಿಯ ಸಾಹಿತ್ಯಸ್ವಭಾವವು: (Literary form) ಅವನು ಪಡೆದ ಅನುಭವ–ವಸ್ತುಗಳ ಸ್ವರೂಪದ ಮೇಲೆ, ಅವನ ಪ್ರಯೋಗಾಭಿಲಾಷೆಯ ಮೇಲೆ ಅವಲಂಬಿಸಿದೆ. ಅದು ಪರಂಪರಾನುಗತಿಕವಿರಬಹುದು; ಹೊಸತು–ಹಳೆಯದರ ಸಮ್ಮಿಶ್ರಣವಿರಬಹುದು; ಹೊಸತಿರಬಹುದು; ತೀರ ಹೊಸತಿರಬಹುದು.

ನಾಲ್ಕನೆಯ ಮಾತು: ಕವಿಯ ಶೈಲಿಯೂ ಸಹ ಬಹುಮಟ್ಟಿಗೆ ಕವಿಯ ಸಿದ್ಧಿ – ಸಂಸ್ಕಾರಗಳಿಂದ, ಅವನ ಅನುಭವ–ವಸ್ತು – ಸಾಹಿತ್ಯ ಪ್ರಕಾರಗಳಿಂದ ನಿರ್ಣಯಿತವಾಗುತ್ತದೆ. ಅದು ಇವೆಲ್ಲವುಗಳ ದೀಪವಿದ್ದಂತೆ ಮಾತ್ರ ಹೊಂದಿಕೊಂಡಿರಬೇಕು. ಅದು ಗ್ರಾಮ್ಯವಿರಬಹುದು; ಗ್ರಾಂಥಿಕವಿರಬಹುದು; ಬಳಕೆ ಮಾತಿನದಿರಬಹುದು; ಇವೆಲ್ಲವುಗಳ ಸಮ್ಮಿಲನವಿರಬಹುದು. ವಿವಿಧ ರೀತಿಯದಾದರೂ ಗಮ್ಯವಾಗಿರಬೇಕು; ಭಾಷಾಶಾಸ್ತ್ರ ವ್ಯಾಕರಣಗಳ ಸೀಮೆಯನ್ನು ಬಿಟ್ಟು ದೂರ ಹೋಗಿರಬಾರದು.

ಐದನೆಯ ಮಾತು: ಅಲಂಕಾರದ ನಿರ್ಣಯವು ಮೇಲೆ ವಿವರಿಸಿದ ಎಲ್ಲ ಮಾತುಗಳನ್ನು ಅವಲಂಬಿಸಿದೆ; ಕವಿಯನ್ನೂ ಅವಲಂಬಿಸಿದೆ. ಇಲ್ಲಿ ಇಷ್ಟು ಮಾತ್ರ ಹೇಳಬಹುದು. ಮೇಲಿನ ಯಾವ ಮಾತಿಗೂ ವಿರುದ್ಧವಾದ ಅಲಂಕಾರಕ್ಕೆ 'ಅಲಂ' ಎಂದು ಉಸಿರಬೇಕಾಗಿ ಬರುವದು.

ಆರನೆಯ ಮಾತು: ಅನುಭವದಿಂದ ಬಿಡಿಸಿ ಕೊನೆಗೆ ತಂದಿಟ್ಟರೂ ಛಂದಸ್ಸು ಅನುಭವಕ್ಕೆ ತೀರ ಸಮೀಪವಾದುದು; ಒಮ್ಮೊಮ್ಮೆ ಇದು

ಅನುಭವದೊಡನೆ ಸಹ ಹುಟ್ಟಿ ಬರುವವುಂಟು. ವೃತ್ತಗಳಿರಲಿ; ಷಟ್ಪದಿ-ಸಾಂಗತ್ಯಗಳಿರಲಿ; ನೂತನ ಛಂದಸ್ಸಿರಲಿ: ಅನುಭವಕ್ಕೂ ಅದಕ್ಕೂ ಅನನ್ಯ ಬಾಂಧವ್ಯವಿರದೆ ಹೋದರೆ ಆ ಛಂದಸ್ಸು ನಿಲ್ಲಲಾರದು. ಒಂದು ಕೃತಿಯಲ್ಲಿ ಹೀಗೆ ನಿಂತ ಛಂದಸ್ಸು ತನಗೆ ಸಮರ್ಪಕವಾಗುವಂತೆ–ಕೃತಿಯಲ್ಲಿದ್ದ ಉಳಿದ ಮಾತುಗಳಿಗೆ ಸಮರ್ಪಕವಾಗುವಂತೆ–ತನ್ನ ಅಂದ–ಚೆಂದವನ್ನು ಕಾಯ್ದುಕೊಳ್ಳುತ್ತ ಹೋಗಬೇಕು.

ಸಂಕ್ಷಿಪ್ತ ಬಾಂಧವ್ಯ,– ಒಬ್ಬ ವ್ಯಕ್ತಿಯೆಂದರೆ ಸಂಕ್ಷಿಪ್ತ ಬುದ್ಧಿ, ಸಂಕ್ಷಿಪ್ತ ಮನಸ್ಸು, ಸಂಕ್ಷಿಪ್ತ ದೇಹ, ಸಂಕ್ಷಿಪ್ತ ಸಮಾಜ,–ಸಂಕ್ಷಿಪ್ತವಾದ 'ಎಲ್ಲವೂ' ಅಹುದು. ವ್ಯಕ್ತಿಯು ಅನುಭವವನ್ನು ಪಡೆಯುವದು ನಾಲ್ಕು ದಿಕ್ಕುಗಳಲ್ಲಿ; ತನ್ನೊಡನೆ, ಇತರ ಜೀವಿಗಳೊಡನೆ, ಪ್ರಕೃತಿಯೊಡನೆ ಪರಮಾತ್ಮನೊಡನೆ. ವ್ಯಕ್ತಿಯ ಅನುಭವದಲ್ಲಿ ಅವನ ಆತ್ಮ, ಮನಸ್ಸು, ಬುದ್ಧಿ, ಹೃದಯ, ಕಲ್ಪನಾಶಕ್ತಿ, ದೇಹ ಮುಂತಾದ ಎಲ್ಲ ಶಕ್ತಿಗಳು ಸಮಾವೇಶವಾಗುವವು. ಕವಿಯೆಂದರೆ ಇಂಥ ಅನುಭವವನ್ನು ಹೆಚ್ಚು ಹೆಚ್ಚಾಗಿಯೂ ಸೂಕ್ಷ್ಮತರವಾಗಿಯೂ ಪಡೆದು ಅದನ್ನು ಮೇಲೆ ಹೇಳಿದಂತೆ ಕೃತಿಗಳಲ್ಲಿ ಬಿಡಿಸಿಕೊಳ್ಳುವ ವ್ಯಕ್ತಿ. ಛಂದೋಬದ್ಧ ಕೃತಿಗಳನ್ನು ರಚಿಸಿದವರನ್ನು ಕವಿಗಳೆಂದು ಕರೆಯುವದೂ ಉಳಿದವರಿಗೆ ಸಾಹಿತಿಗಳೆಂದು ಹೇಳುವದೂ ಒಂದು ಸಂಪ್ರದಾಯವಾಗಿದೆ. (ನಾಟಕಕಾರ, ಕತೆಗಾರ, ಮು.)

೩

ಅಂದ ಮೇಲೆ ಒಂದು ಕೃತಿಯ ಯೋಗ್ಯತೆಯನ್ನು ನಿರ್ಣಯಿಸಲು ಎರಡು ಮಾತುಗಳು ಉಪಯೋಗ ಬೀಳುತ್ತವೆ. ಕವಿಯ ಅನುಭವದ ಜಾತಿ, ರೀತಿ, ಮತ್ತು ತರಗತಿ; ಹಾಗು ನಿರೂಪಣೆಯ ಕಾರ್ಯದಲ್ಲಿ ಕವಿಯು ಪಡೆದ ಯಶಸ್ಸು. ನಿರೂಪಣೆಯಲ್ಲಿ ಮೇಲಿನ ಉಳಿದ ಐದು ಮಾತುಗಳು ಸೇರುವವು.

ಅನುಭವದ ಜಾತಿ–ರೀತಿಗಳನ್ನು ನಿರ್ಣಯಿಸುವಾಗ ನಾವು ಇನ್ನೂ ಅನೇಕ ವಿಷಯಗಳನ್ನು ಲಕ್ಷ್ಯದಲ್ಲಿ ತರಬೇಕಾಗುವದು; (೧) ಆ ಅನುಭವದಲ್ಲಿ ಯೋಜಿಸಲ್ಪಟ್ಟ ಕವಿಯ ವ್ಯಕ್ತಿತ್ವದ ಸ್ಥಿತಿಗತಿ; ಅಂದರೆ ಕವಿಯ ದೃಷ್ಟಿ

ಸಾಫಲ್ಯದ ಘಟ್ಟ. (೨) ಆದರಲ್ಲಿ ಸಮಾವೇಶವಾದ ವಸ್ತುವಿನ (ಸ್ವತಃ ತಾನು, ಇತರ ಜೀವಿಗಳು; ಪ್ರಕೃತಿ; ಇಲ್ಲವೆ ಪರಮಾತ್ಮ. Object) ಸ್ವರೂಪ ಹಾಗು ರಾಮಣೀಯಕತೆ. (೩) ಆ ಅನುಭವದಲ್ಲಿ ಹೊಂದಿಕೊಂಡ ಒಂದು ವಿಶಿಷ್ಟ ಕಾಲಮಾನದ ಸ್ವರೂಪ ಹಾಗು ವರ್ಚಸ್ಸು. (೪) ಅದರಲ್ಲಿ ಒಡೆದು ಕಾಣುವ ಸರ್ವಕಾಲೀನ ಜನಾಂಗಶ್ರೇಯವಾದ ಮಾತುಗಳ ಬಗೆ. (೫) ಇವೆಲ್ಲ ಅನುಭವದಲ್ಲಿ ಒಂದರೊಳಗೊಂದು ಕೂಡಿ ನಿರ್ಮಿಸುವ ಸಮರಸದ ಉಜ್ವಲತೆ, ಪೂರ್ಣತೆಗಳು.

೪

ಇಂತು ಕವಿಯ ಅನುಭವ-ನಿರೂಪಣೆಗಳನ್ನು ಬೆಲೆ ಕಟ್ಟುವದು ವಿಮರ್ಶಕರನ್ನು ಕೂಡಿದೆ, ಜನತೆಯನ್ನು ಕೂಡಿದೆ. ಆದರೂ ನಾವು ಒಂದು ಮಾತನ್ನು ನೆನಪಿನಲ್ಲಿಡಬೇಕು. ಒಂದು ಕೃತಿಯ ಬೆಲೆಯನ್ನು ನಿರ್ಣಾಯಕವಾಗಿ ಕಟ್ಟಲು ನಾಲ್ಕು ವಿಷಯಗಳು ಸಹಾಯಕಾರಿಯಾಗುವವು: (೧) ಕೃತಿಯನ್ನು ಬರೆಯುವ ಪೂರ್ವದಲ್ಲಿದ್ದ ಕವಿಯ ಮನಃಸ್ಥಿತಿಯನ್ನು ನಾವು ತಿಳಿಯಬೇಕು. (೨) ಬರೆಯುವದು ಮುಗಿದ ಮೇಲೆ ಆ ಕೃತಿಯ ಬಗೆಯೇ ಇನ್ನೂ ಕವಿಗೆ ಏನೆನಿಸುತ್ತಿದೆಯೆಂಬುದನ್ನು ಅರಿತುಕೊಳ್ಳಬೇಕು. (೩) ಕೃತಿಯು ಪ್ರಸಿದ್ಧವಾದಾಗ ಜನತೆಯು ಏನೆನ್ನುವದೆಂಬುದು ಗೊತ್ತಾಗಬೇಕು. (೪) ಕವಿಯ ಕಾಲವು ಗತಿಸಿ ಹೋದ ಮೇಲೂ ಸ್ಥಿರವಾಗುಳಿದ ಜನತೆಯ ಅಭಿಪ್ರಾಯವನ್ನು ಪಡೆಯಬೇಕು.

ನಾನು ಈ ಕವಿತೆಗಳಿಗೆ 'ಮೊದಲು ಮಾತು'ಗಳನ್ನು ಬರೆದುದು ಇಲ್ಲಿ ಪ್ರಸ್ತಾಪಿಸಿದ ಮೊದಲನೆಯ ಕಾರಣದ ಸಲುವಾಗಿ. ಮೊದಲು ಮಾತುಗಳೂ ಪ್ರಸ್ತಾವನೆಯೂ ಕೂಡಿಯೇ ಎರಡನೆಯ ಬೇಡಿಕೆಯನ್ನು ಪೂರೈಸಿ ಕೊಡುತ್ತಿವೆ. ಮುಂದೆ ವಿಮರ್ಶಕರ ಕೆಲಸ. ಅವರ ಅಭಿಪ್ರಾಯಗಳೂ ನಿರ್ಣಾಯಕವಾಗಲಾರವು. ನಮ್ಮಲ್ಲಿ ಕೆಲವೆಡೆ ಈ ತಪ್ಪು ಕಲ್ಪನೆಯು ಉಳಿದಿದೆ, – ಕವಿಯು ಅಪರಾಧಿ, ವಿಮರ್ಶಕನು ನ್ಯಾಯಾಧೀಶನೆಂದು. ನಿಜವಾದ ನ್ಯಾಯಾಧೀಶನು ಬೇರೆಯಿದ್ದಾನೆ. ಅವನು ಈ ನಾಲ್ಕು ಮಾತುಗಳನ್ನೂ ಲಕ್ಷ್ಯದಲ್ಲಿ ತರುವನು.

## ೫

ಆದರೆ, ಮೂರನೆಯ ಮಾತಾದ ವಿಮರ್ಶೆಗೆ ಇನ್ನೊಂದು ಅತ್ಯಗತ್ಯ
ವಾದ ಸ್ಥಾನವಿದೆ. ಕವಿಯ ಕೃತಿಗಳು ಒಂದು ರೀತಿಯಿಂದ ಸಾರ್ವಜನಿಕ
ಆಸ್ತಿಯಿದ್ದಂತೆ. ಕವಿಯು ಆ ಆಸ್ತಿಯ ಪರಿಪಾಲಕನಿದ್ದಂತೆ. ಜನತೆಯು
ಕೃತಿಗಳಲ್ಲಿ ಸಮಂಜಸವಾಗಿ ಕೆಲವು ದೋಷಗಳನ್ನು ತೋರಿಸಿದರೆ ಕವಿಯು
ಅದರಂತೆ ತಿದ್ದಿಕೊಳ್ಳಬೇಕು. ಈ ಕೃತಿಯಲ್ಲಿ ಹುರುಳಿಲ್ಲೆಂದು ಜನತೆಯ
ಅಭಿಪ್ರಾಯವಾಗಿ ಕವಿಗೂ ಅದು ಸತ್ಯವೆಂದು ತೋರುತ್ತಿದ್ದರೆ ಅವನು ಆ
ಕೃತಿಯನ್ನು ನಿರಾಕರಿಸಿ ಬಿಡಬೇಕು. ಇದರಿಂದ ಸಾಮಾಜಿಕ ಸ್ವಾಸ್ಥ್ಯವು
ಹೆಚ್ಚುವದು. ಪೂರ್ಣಕೃತಿಗಳು ಬೆಳೆಯಲು ಅನುಕೂಲವಾಗುವದು.

**"ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ"**

ಎಂಬ ಕುಮಾರವ್ಯಾಸನ ಪ್ರತಿಜ್ಞೆಯಲ್ಲಿ ತಿರುಳೂ - ಜೊಳ್ಳೂ
ಬೆರೆತುಕೊಂಡಿದೆ. ಕವಿಯು ತನ್ನ ಮೂಲಭಾವನೆಗೆ ಭಂಗ ಬರುವಂತೆ
ತಿದ್ದಲಾರ; ತನ್ನ ಹೃದಯವು ಉಕ್ಕೇರಿದಾಗ—ಶಬ್ದವೇ ಶ್ರುತಿಯಾದಾಗ—
ಬರೆದ ಚರಣಗಳನ್ನೂ ತಿದ್ದಲಾರ. ಆದರೆ ಶಬ್ದವು ಎಲ್ಲೆಡೆಗೂ ಶ್ರುತಿಯಾ
ಗುವದಿಲ್ಲ. ಶೈಲಿಯ ಪರಿಪಾಕವು ಅಭ್ಯಾಸದಿಂದ ಬರತಕ್ಕ ವಿಷಯ
ವಾಗಿದೆ. ಅಲ್ಲದೆ ಕವಿಯ ಶಕ್ತಿಗಳು ಯಾವಾಗಲೂ ಪ್ರಗತಿಪರವಾಗಿರು
ತ್ತವೆ. ಜಗತ್ತಿನ ಕವಿಗಳೆಲ್ಲ ಸಾಯುವ ವರೆಗೆ ತಮ್ಮ ಕೃತಿಗಳನ್ನು ತಿದ್ದುತ್ತಾ
ನಡೆದರು. ಕುಮಾರವ್ಯಾಸನಂತೆ ಕೆಲವರು ತಿದ್ದದಿದ್ದರೆ ಆ ಮಾನಕ್ಕನು
ಸರಿಸಿ ಅವರ ಕೃತಿಗಳಲ್ಲಿ ದೋಷಗಳನ್ನು ಕಾಣಬಹುದು. ತಿದ್ದುವದು
ನಿರ್ದೋಷಿಯಷ್ಟೇ ಅಲ್ಲ, ಅವಶ್ಯವಾದ ಮಾತು.

ನನ್ನ ಗೆಳೆಯರ ಮಾತಿನ ಮೇರೆಗೆ ಈ ಕವಿತೆಗಳನ್ನು ಅಲ್ಲಲ್ಲಿ ತಿದ್ದಿದ್ದೇನೆ.
ಜನತೆಯ ಅಭಿಪ್ರಾಯಗಳೂ ಬರಲಿ. ಅವು ನನಗೆ ಸಮರ್ಪಕವಾಗಿ ತೋರಿ
ದರೆ ಅವುಗಳನ್ನು ಬಳಸಿಕೊಂಡು ಕಳಿಸಿದವರಿಗೆ ಕೃತಜ್ಞನಾಗಿರುವೆನು.

ಅಭಿಪ್ರಾಯಗಳನ್ನು ಕೊಡಲು ರೂಢಿಯ ವಿಮರ್ಶಕರಿಗಷ್ಟೇ ಅಲ್ಲ
ಓದುಗರಿಗೆಲ್ಲರಿಗೂ ಬಾಧ್ಯತೆಯಿದೆ. ವಯಸ್ಸು, ಉದ್ಯೋಗ, ಪದವಿ,—
ಇವೆಲ್ಲ ಆನುಷಂಗಿಕ ವಿಷಯಗಳು. ಕವಿಹೃದಯವೂ ಅದನ್ನು ವಿಮರ್ಶಿ

ಸುವ ಯೋಗ್ಯತೆಯೂ ಒಮ್ಮೊಮ್ಮೆ ಚಿಕ್ಕವರಲ್ಲಿ, ಅಂಗಡಿಕಾರರಲ್ಲಿ, ಕಂಡು ಬರಬಹುದು. ಅದೂ ಸ್ವೀಕರಿಸತಕ್ಕುದು. ಎಲ್ಲ ವಿಮರ್ಶೆಗೂ ಒಂದೇ ಕಟ್ಟು ಮಾತ್ರ ಇರುವದು: ಅದು ಸ್ಫುಟವಾಗಿರಬೇಕು, ಮುಂಚಿನಂತಲ್ಲ. "ಈ ಕೃತಿಯಲ್ಲಿ ಹುರುಳಿಲ್ಲ" ಎಂದಿಷ್ಟೇ ಹೇಳಿದರೆ ಸಾಲದು. ಅದನ್ನು ಸೋದಾಹರಣವಾಗಿ ಹೇಳಬೇಕು. ಅಂದರೆ ಮಾತ್ರ ಅದನ್ನು ಉಪಯೋಗಿಸಿಕೊಳ್ಳಲು ಸಾಧ್ಯವಾಗುವದು.

(೬)

ಈ ಎಲ್ಲ ಕಾರಣಗಳ ಮೂಲಕ ನಾನು ಒಂದು ಹಂಚಿಕೆಯನ್ನು ಓದುಗರೆದುರಿಗಿಡಲು ಪ್ರಯತ್ನಿಸಿದ್ದೇನೆ.ದಯವಿಟ್ಟು ಅವರು ಆ ರೀತಿಯಾಗಿ ತಮ್ಮ ಅಭಿಪ್ರಾಯಗಳನ್ನು ಕಳಿಸಿದರೆ ನಾನು ಅವರಿಗೆ ಉಪಕೃತನಾಗಿರುವೆನು. ಈ ರೀತಿಯಾಗಿ ಬಿನ್ನವಿಸುವಲ್ಲಿ ನನ್ನ ಉದ್ದೇಶಗಳು ಎರಡು: (೧) ಕೃತಿಗಳ ಪರಿಪೂರ್ಣತೆಗಾಗಿ ಆ ಅಭಿಪ್ರಾಯಗಳನ್ನು ಬಳಸಿಕೊಳ್ಳುವದು. (೨) ನಾನು ವಿಮರ್ಶಾಶಾಸ್ತ್ರವನ್ನು ಕುರಿತು ಬರೆಯಬೇಕೆಂದಿರುವ ಒಂದು ಗ್ರಂಥಕ್ಕಾಗಿ ಅವುಗಳನ್ನು ಉಪಯೋಗಿಸುವದು.

ಅಭಿಪ್ರಾಯಗಳನ್ನು ಕಳಿಸುವ ಮಹನೀಯರು ನನ್ನ ಉದ್ದೇಶಗಳಲ್ಲಿ ತಥ್ಯವನ್ನು ಕಂಡು ಆ ರೀತಿಯ ಉಪಯೋಗಕ್ಕಾಗಿ ಸಮ್ಮತಿಸುವರೆಂದು ನಂಬಿದ್ದೇನೆ. ಅಭಿಪ್ರಾಯವನ್ನು ಉಪಯೋಗಿಸುವಾಗ ಅವರ ಸಮ್ಮತಿ ಇಲ್ಲದೆ ಅವರ ಹೆಸರನ್ನು ನಾನು ಪ್ರಕಟಿಸುವದಿಲ್ಲ. ಅಭಿಪ್ರಾಯಗಳಲ್ಲಿ ಪ್ರಶಂಸನೆ, ದೋಷವಿವರಣೆ,–ಏನೂ ಇರಬಹುದು. ಶಾಸ್ತ್ರೀಯ ದೃಷ್ಟಿಯಲ್ಲಿ ಇವುಗಳಿಗೆಲ್ಲ ಅಷ್ಟೇ ಮಹತ್ವವಿದೆ.

ನನ್ನ ಹಂಚಿಕೆ ಹೀಗೆ: ಈ ಪುಸ್ತಕದ ಮೊದಲನೆಯ ಆವೃತ್ತಿಯಲ್ಲಿ ಸಾವಿರ ಪ್ರತಿಗಳನ್ನು ಮುದ್ರಿಸಿದೆ. ಎಲ್ಲ ಪ್ರತಿಗಳಿಗೂ ನಂಬರು ಹಾಕಿದೆ. ಎಲ್ಲ ಪ್ರತಿಗಳಲ್ಲಿ ಕೆಲವು ಕಲಮುಗಳುಳ್ಳ ಒಂದೊಂದು ಪಾನನ್ನು ಇಟ್ಟಿದೆ. ಆ ಪ್ರತಿಯ ನಂಬರು, ಅದನ್ನು ಪಡೆದವರ ಹೆಸರು, ಅವರ ವಿಳಾಸ, ಅವರ ಉದ್ಯೋಗ, ತಮ್ಮ ಹೆಸರನ್ನು ಉಪಯೋಗಿಸಲು ಸಮ್ಮತಿಯಿದ್ದರೆ ಆ ಬಗ್ಗೆ ಸೂಚನೆ,–ಇವೇ ಮುಂತಾದವು ಅಲ್ಲಿಯ ಕಲಮುಗಳು. ಅಭಿ

ಪ್ರಾಯವನ್ನು ಕಳಿಸುವಾಗ ಆ ಅಭಿಪ್ರಾಯದ ಮುಖಪತ್ರವೆಂದು ಈ ಪಾನಿನಲ್ಲಿಯ ಕಲಮುಗಳನ್ನು ತುಂಬಿ ಕಳಿಸಬೇಕೆಂದು ವಿಜ್ಞಾಪನೆ. ನಾನು ಓದುಗರ ವೈಯಕ್ತಿಕ ವಿಷಯಗಳನ್ನು ತಿಳಿಯಲು ಈ ವಿಜ್ಞಾಪನೆಯಲ್ಲಿ ಒಂದು ಅಕ್ಷಮ್ಯ ಜಿಜ್ಞಾಸೆಯನ್ನು ತೋರಿಸಿದ್ದೇನೆಂದು ಯಾರೂ ಭಾವಿಸ ಲಾರರೆಂಬ ವಿಶ್ವಾಸವು ನನಗಿದೆ. ಇದೊಂದು ಶಾಸ್ತ್ರ. ಅದರ ಪ್ರತಿಪಾದ ನೆಗೆ ಬೇಕಾದ ಎಲ್ಲ ವಿಷಯಗಳನ್ನು ಸಂಗ್ರಹಿಸುವದು ಅವಶ್ಯವಾಗಿದೆ.

ಇಂಥ ಅಭಿಪ್ರಾಯಗಳು ಬಂದಾಗ ಅವುಗಳನ್ನು ಯೋಗ್ಯ ರೀತಿ ಯಿಂದ ಉಪಯೋಗಿಸುವ ಹೊಣೆಯು ನನ್ನ ಮೇಲೆ. ವಿಮರ್ಶಾಶಾಸ್ತ್ರದ ವಿವರಣೆಗಾಗಿ ಕೇವಲ ಶಾಸ್ತ್ರೀಯ ಬುದ್ಧಿಯಿಂದ ಅವುಗಳನ್ನು ಉಪಯೋ ಗಿಸುವೆನೆಂಬುದನ್ನು ನಾನು ಸ್ಪಷ್ಟವಾಗಿ ಹೇಳಬಲ್ಲೆನು. ಇಂಥ ಕೆಲವು ಪ್ರಶ್ನೆಗಳನ್ನು ಕುರಿತು ಚರ್ಚಿಸುವಾಗ ಅವುಗಳ ಉಪಯೋಗವಾಗುವದು: (೧) ಕಾವ್ಯವನ್ನು ಓದುವ ರೀತಿ. (೨) ಕಾವ್ಯಾನುಭವವನ್ನು ಪಡೆಯುವ ರೀತಿ. (೩) ಒಂದು ಕೃತಿಯ ಯೋಗ್ಯತೆಯನ್ನು ನಿರ್ಣಯಿಸುವ ರೀತಿ; ಮು. ಅಭಿ ಪ್ರಾಯವನ್ನು ಉದಾಹರಿಸುವಾಗ 'ಇಂಥ ನಂಬರಿನವು' ಎಂದಿಷ್ಟೆ ವಾಡಿಕೆ ಯಾಗಿ ಹೇಳಲಾಗುವದು.

ಪ್ರತಿಯನ್ನು ಪಡೆಯದೆ ಅದನ್ನು ಓದಿಕೊಂಡವರೂ ಸಹ ತಮ್ಮ ಅಭಿಪ್ರಾಯವನ್ನು ಕಳುಹಿಸಬಹುದು. ಅವರು ಎರಡು ಮಾತುಗಳನ್ನು ಮಾತ್ರ ದಯವಿಟ್ಟು ಪಾಲಿಸಬೇಕಾಗಿ ಬಿನ್ನಹ: (೧) ತಾವು ಓದಿದ ಪ್ರತಿಯ ನಂಬರನ್ನು ತಿಳಿಸಬೇಕು. (೨) ಕೊನೆಯ ಪಾನಿನಲ್ಲಿ ಕೊಟ್ಟ ಕಲಮು ಗಳನ್ನು ಪ್ರತಿ ಮಾಡಿಕೊಂಡು ತುಂಬಿ ಕಳುಹಿಸಬೇಕು. ನನ್ನ ಸಂಗ್ರಹ ದಲ್ಲಿ ಅವರಿಗೆ ಕೊಟ್ಟ ನಂಬರನ್ನು ಮರುಟಪಾಲಿಗೆ ನಾನು ತಿಳಿಸುವೆನು.

ಇಂಥದೊಂದು ಪ್ರಯೋಗವು ಅವಶ್ಯವಾಗಿದೆಯೆಂದು ನನಗೆನಿಸಿದ್ದ ರಿಂದ ನಾನು ಈ ಕೆಲಸಕ್ಕೆ ಕೈಹಾಕಿದ್ದೇನೆ. ವಿಮರ್ಶೆಯ ಪ್ರಾಂತವು ಒಂದು ರಣರಂಗವಲ್ಲ. ಅದೊಂದು ಪಾಕಶಾಲೆ. ಬಲ್ಲ–ಬಲ್ಲವರು ಕೂಡಿ ಅಡಿಗೆ ಯನ್ನು ಪಾಕಕ್ಕೆ ತರುವ ಸ್ಥಲ.

೭

ಈ ಕೃತಿಯನ್ನು ಕನ್ನಡ ನಾಡಿನ ಮಹಾಜನರ ಕೈಯಲ್ಲಿರಿಸಲು ಸಾಧ್ಯವಾದುದರಿಂದ ನನಗೆ ಸಂತೋಷವಾಗುತ್ತಲಿದೆ. ಈ ಕೆಲಸದಲ್ಲಿ ಅನೇಕರು ನನಗೆ ನೆರವಾದರು. ಕಾವ್ಯದಲ್ಲಿಯೂ ಸೌಂದರ್ಯಶಾಸ್ತ್ರದಲ್ಲಿಯೂ ನನಗೆ ಮಾರ್ಗದರ್ಶಕರಾದ ಗೆ। ಬೇಂದ್ರೆಯವರು ನನ್ನ ಬಿನ್ನಹದ ಮೇರೆಗೆ ಈ ಪ್ರಸ್ತಾವನೆಯ ಪೂರ್ವಾರ್ಧವನ್ನು ಬರೆದು ಕೊಟ್ಟರು; ಅಲ್ಲದೆ ಈ ಪ್ರಸ್ತಾವನೆಯ ವಿಷಯವನ್ನು ಕುರಿತು ಅನೇಕ ಸಲಹೆಗಳನ್ನು ಕೊಟ್ಟರು. ಉಳಿದ ಗೆಳೆಯರೂ ವಿಧವಿಧವಾಗಿ ನೆರವಾಗಿದ್ದಾರೆ. ಈ ಪುಸ್ತಕವನ್ನು ಇಷ್ಟು ಬೇಗ ಪ್ರಸಿದ್ಧಿಸಿದ ಶ್ರೇಯಸ್ಸು ಗೆ। ಚುಳಿಕಿಯವರಿಗೆ ಸಲ್ಲುವದು. ಶ್ರೀ. ರಾಯದುರ್ಗರವರು ತಮ್ಮ ಮೋಹನ ಮುದ್ರಣಶಾಲೆಯಲ್ಲಿ ಇದನ್ನು ಅಲ್ಪಾವಕಾಶದಲ್ಲಿ ಅಚ್ಚು ಹಾಕಿಕೊಟ್ಟರು. ಇವರೆಲ್ಲರಿಗೂ ನಾನು ಉಪಕೃತನಾಗಿದ್ದೇನೆ.

ವಿ. ಕೃ. ಗೋಕಾಕ.

# ಬಿನ್ನಹ

ಶ್ರೀ. ಶ್ರೀರಂಗ ಇವರ "ಹರಿಜನ್ವಾರ" ಹಾಗು ಶ್ರೀ. ರಮಾಕಾಂತ ಇವರ "ಕಲ್ಕಿ" ಎಂಬವೆರಡು ಪ್ರಕಟನೆಗಳನ್ನು ನಮ್ಮ ಸಾಹಿತ್ಯ ಪ್ರಕಟನ ಮಂದಿರವು ಪ್ರಕಾಶನಗೊಳಿಸಿ ಇದೀಗ ಗೆ। ವಿನಾಯಕ ಇವರ "ಕಲೋಪಾಸಕ ಮತ್ತು ಇತರ ನೀಳ್ಗವಿತೆಗಳು" ಎಂಬ ಮೂರನೆಯ ಪ್ರಕಟನೆಯನ್ನಾಗಿ ಪ್ರಕಟಿಸಿ ತನ್ನ ಸಾಹಿತ್ಯ ಸೇವೆಯ ಹೆಜ್ಜೆಯನ್ನು ಮುಂದಿಡುತ್ತ ನಡೆದಿದೆಯೆಂದು ಹೇಳಿಕೊಳ್ಳಲು ನಮಗೆ ಹರುಷವಾಗುತ್ತದೆ. ಗೆ। ವಿನಾಯಕ ಇವರ ಈ ಕಾವ್ಯ ಸಂಗ್ರಹವು ನಮಗೆ ಪ್ರಕಟಮಾಡಲು ಲಭಿಸಿದುದಕ್ಕಾಗಿ ಅವರಿಗೆ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಸಮರ್ಪಿಸುತ್ತೇವೆ.

ಒಳ್ಳೊಳ್ಳೆ ಗ್ರಂಥಗಳನ್ನು ಅನುಕೂಲತೆಯಾದಂತೆ ಬೆಳಕಿಗೆ ತರುವ ಗುರಿಯನ್ನಿಟ್ಟುಕೊಂಡು ಸಾಹಿತ್ಯ ಪ್ರಕಟನ ಮಂದಿರವು ತನ್ನ ಶಕ್ತ್ಯನುಸಾರವಾಗಿ ಸರಸತಿಯ ಸೇವೆಯನ್ನು ಮಾಡಬೇಕೆಂದು ಹಂಬಲಿಸುತ್ತಲಿದೆ.

ಪ್ರಕಾಶಕರು—

# ಪರಿವಿಡಿ

# ಮಹಾಶ್ವೇತೆ

## ( ಮೊದಲು ಮಾತು )

ಮೈಸೂರು ವಿಶ್ವವಿದ್ಯಾಲಯದವರು ಪ್ರಕಟಿಸಿದ ನಾಗವರ್ಮನ 'ಕಾದಂಬರೀ ಸಂಗ್ರಹ'ವನ್ನು ಓದುತ್ತಿದ್ದಾಗ ನನ್ನಲ್ಲಿ ಈ ದೃಶ್ಯದ ಮೂಲ ಕಲ್ಪನೆಯು ಹೊಳೆಯಿತು. ಅದಕ್ಕೂ ಮೊದಲು ಅತಿಭೌತಿಕ ಪ್ರೇಮ ವಾದಿಗಳು ವರ್ಣಿಸುವ 'ಅಸುವಿನೊಲುಮೆ'ಯನ್ನು ಕುರಿತು ಧೇನಿಸುತ್ತ ಬಂದಿದ್ದೆ. ಪ್ರೀತಿಯು ಕೇವಲ ಮಾನಸಿಕವಾಗಿರಲಾರದು; ದೈಹಿಕವೂ ಆಗಿರಲಾರದು. ಇವೆರಡರ ಸಮಾಗಮವೇ ನಿಜವಾದ ಪ್ರೀತಿಯೆಂದು ನನಗೆನಿಸಿತ್ತು. 'ಕಾದಂಬರೀ ಸಂಗ್ರಹ'ವನ್ನು ಓದುತ್ತಿರುವಾಗ ನನ ಗೊಂದು ಮಾರ್ಪಾಟು ತೋಚಿತು. ಜಾಬಾಲಿ ಋಷಿಗಳ ಮಾತನ್ನು ಕೇಳಿ ಸ್ವರೂಪ ಜ್ಞಾನವನ್ನು ಹೊಂದಿದ ವೈಶಂಪಾಯನ ಶುಕವು ಲಕ್ಷ್ಮೀದೇವಿಯ ಕೈಯಲ್ಲಿ ಸಿಕ್ಕು ಶೂದ್ರಕನೆಡೆಗೆ ತೆರಳುವದಕ್ಕಿಂತ ಮಹಾಶ್ವೇತೆಯ ಕಡೆಗೆ ಹಾರಿ ಬರಬಾರದೇಕೆ ? ಹೀಗಾಗಲು ಅದೊಂದು 'ಅಸುವಿನೊಲುಮೆ'ಯ ದೃಷ್ಟಾಂತವಾಗುವದು. ಇತ್ತ ಮೂಲದಲ್ಲಿಯೇ ಕಾದಂಬರಿಯು ಚಂದ್ರಾ ಪೀಡನ ಮೃತ ದೇಹವನ್ನು ಪರಾಂಬರಿಸುತ್ತ ಕುಳಿತಿದ್ದಾಳೆ. ದೇಹವು ದಿನದಿನಕ್ಕೆ ಕಾಂತಿಯುತವಾಗುತ್ತಲಿದೆ. ಆದರೆ ಅವಳು ನಲ್ಲನ ಆತ್ಮವನ್ನು ಕಳೆದುಕೊಂಡವಳು ! ಇವರೀರ್ವರ ಜೀವನದಲ್ಲಿ ಕಂಡ ಕೊರತೆಯನ್ನೂ ಅದು ಸುಖದಲ್ಲಿ ಕೊನೆಗಾಣುವ ಬಗೆಯನ್ನೂ ಚಿತ್ರಿಸಿದರೆ ನಾನು ಕಂಡು ಕೊಂಡ ಪ್ರೀತಿಯ ಆದರ್ಶವು ಚೆನ್ನಾಗಿ ಬಿಂಬಿತವಾಗುವದೆಂದು ತಿಳಿದು ಈ ದೃಶ್ಯವನ್ನು ಬರೆದೆನು. ಕಥೆಯಲ್ಲಿ ನಾನು ಮಾಡಿದ ಮುಖ್ಯವಾದ

ಷೇಕ್ಸ್‌ಪಿಯರ್ ಮಹಾಕ್ಷೇತ್ರಕ್ಕೆ ಸಂಬಂಧಿಸಿದ್ದೊಂದೇ. ಉಳಿದ ಸಣ್ಣ ಪುಟ್ಟ ಬದಲಾವಣೆಗಳು ಅದರ ಮೂಲಕ ಬರುವವು.

ಕೆಲವು ಮಟ್ಟಿಗೆ ಬದಲಿಸಿದ ಕಥೆಯು ಇಲ್ಲಿದೆ. ಆದರೆ ಈ ದೃಶ್ಯದ ಮುಖ್ಯ ವಸ್ತುವು ಆ ಕಥೆಯಲ್ಲ, ನಾನೇ ಕಲ್ಪಿಸಿದ ಸನ್ನಿವೇಶಗಳು. ಅವು ಗಳನ್ನು ಪುಷ್ಟಗೊಳಿಸಲು ಮಾತ್ರ ಕಥೆಯು ಹಿನ್ನೆಲೆಯಾಗಿದೆ. ಮೊದಲನೆಯ ಪ್ರವೇಶದಲ್ಲಿ ಮೂಲದಲ್ಲಿಯಂತೆ ಕಾದಲರ ಸಮಾಗಮವಾಗುವದು, ಹೆಚ್ಚು ಕಡಮೆ ಅದೇ ಕಾರಣಗಳ ಸಲುವಾಗಿ. ಆದರೆ ಅದಕ್ಕೆ ಮೊದಲು ಜರಗುವ ವೃತ್ತಾಂತವೆಲ್ಲ ನಾನೇ ಕಲ್ಪಿಸಿದ್ದು. ಎರಡನೆಯ ಪ್ರವೇಶದಲ್ಲಿ, ಕಥೆಯೂ ಸಹ ಬಹುಮಟ್ಟಿಗೆ ನನ್ನದು. ಮೂರನೆಯ ಪ್ರವೇಶದಲ್ಲಿ, ಗಂಧರ್ವ ಲೋಕದಲ್ಲಿ ವಿವಾಹವಾಗುವದೆಂಬ ಸೂಚನೆಯು ಮೂಲದೊಳಗಿನದು. ಉಳಿದುದೆಲ್ಲ ನಾನು ಕಲ್ಪಿಸಿದ್ದು. ಮೂಲದೊಡನೆ ಸ್ಪರ್ಧೆಯನ್ನು ಹೂಡಿದೆ ನೆಂದು ಮಾತ್ರ ಈ ಹೇಳಿಕೆಯ ಮೇಲಿಂದ ಯಾರೂ ತಿಳಿಯಬಾರದು. ನಾನು ಬರೆದ ರೀತಿಯನ್ನು ವಿವರಿಸಿದೆನು. ಇಷ್ಟೆ. ಮೂಲ ಕಥೆಯ ಸಾರಾಂಶವನ್ನು ಇಲ್ಲಿ ಕೊಟ್ಟಿದೆ. ಅದರೊಡನೆ ದೃಶ್ಯವನ್ನು ಹೋಲಿಸಿ ನೋಡಿದರೆ ಸಾಮ್ಯ–ವ್ಯತ್ಯಾಸಗಳು ಗೊತ್ತಾಗುವವು.

ಮೊದಲನೆಯ ಪ್ರವೇಶದೊಂದಿಗೆ ದೃಶ್ಯವನ್ನೂ ಮುಗಿಸುವ ವಿಚಾರ ವಿದ್ದಿತು. ಆದರೆ 'ನಾನು ಅರಸ; ನೀನು ಅರಸಿ' ಎಂಬ ನನ್ನ ಒಂದು ಇಂಗ್ಲಿಷ ಕವಿತೆಯ ಅನುವಾದವು ನನಗೆ ಎರಡನೆಯ ಪ್ರವೇಶದ ಕಲ್ಪನೆ ಯನ್ನು ಕೊಟ್ಟಿತು. ಮುಂದೆ ಕವಿತೆಯನ್ನೂ ಆ ಪ್ರವೇಶದಲ್ಲಿ ಸೇರಿಸಿದೆ. ನಾನು ಸ್ವತಂತ್ರವಾಗಿ ಬರೆದಿದ್ದ 'ಕಿನ್ನರಿಯರ ಹಾಡು' ಮೂರನೆಯ ಪ್ರವೇಶವನ್ನು ಬರೆಯಲು ಅವಕಾಶವನ್ನು ಕಲ್ಪಿಸಿಕೊಟ್ಟಿತು. ಕಾರಣ ಆ ಹಾಡನ್ನೂ ಅದರಲ್ಲಿ ಸೇರಿಸಿದೆ.

ದೃಶ್ಯಕಾವ್ಯದ ಅಂಗವು ಈ ರೂಪಕದಲ್ಲಿ ಹೆಚ್ಚಾಗಿದ್ದುದರಿಂದ ಇದನ್ನು ಒಂದು ಕವನಾತ್ಮಕ ದೃಶ್ಯವೆಂದು ಕರೆದಿದ್ದೇನೆ. Masque (ನಾಟಿಕೆಯ) ದ

ರೀತಿಯಾಗಿ ಇದು ಅಭಿನಯಿಸಲು ಯೋಗ್ಯವಾಗಿದೆಯೆಂದು ಕೆಲವರು ನನಗೆ ಹೇಳಿದ್ದಾರೆ. ಅದು ಪ್ರಯೋಗಾಂತ್ಯದಲ್ಲಿ ನೋಡಬೇಕಾದ ಮಾತು.

ಇಲ್ಲಿಯ ನೇಪಥ್ಯವಿಧಾನ ಸೂತ್ರಗಳನ್ನು ನಾಗವರ್ಮನಿಂದ ಆಯ್ದು ಕೊಂಡಿದೆ. ನಮ್ಮ ಪ್ರಾಚೀನ ಕವಿಗಳು ನೋಟಗಳನ್ನು ಚಿತ್ರಿಸುವದರಲ್ಲಿ ಪ್ರವೀಣರು; ವಾಸ್ತುಶಿಲ್ಪವನ್ನೇ ಕಾವ್ಯದಲ್ಲಿ ತಂದಿರುವವರು. ಬಾಣ ಕಾದಂಬರಿಯನ್ನು ಅನುವಾದಿಸುವಲ್ಲಿ ಸಹ ನಾಗವರ್ಮನ ಶೈಲಿಯು ಚಿತ್ತಾಕರ್ಷಕವಾಗಿದೆ. ನನಗೆ ಬೇಕಾದ ಸನ್ನಿವೇಶಗಳನ್ನು ನಾನು ಕಲ್ಪಿಸಿ ಕೊಂಡ ಮೇಲೆ ಅವುಗಳಿಗೆ ಸರಿಹೋಗುವ ವರ್ಣನೆಯನ್ನೂ ಭಾಷೆಯನ್ನೂ ಆದಷ್ಟು ಮಟ್ಟಿಗೆ ನಾಗವರ್ಮನ ಶಬ್ದಗಳಲ್ಲಿಯೇ ಎತ್ತಿಕೊಂಡಿದ್ದೇನೆ. ಅವು ಒಂದೆಡೆಗೆ ದೊರೆಯುವದಿಲ್ಲ; 'ಕಾದಂಬರೀ ಸಂಗ್ರಹ'ದಲ್ಲೆಲ್ಲ ಹರಡಿ ಕೊಂಡಿವೆ. ನಾನು ಕಲ್ಪಿಸಿದ ಸನ್ನಿವೇಶಗಳೇ ಇವುಗಳನ್ನು ಪವಣಿಸುವ ಸೂತ್ರಗಳಾಗಿವೆ. ಮೂರನೆಯ ಪ್ರವೇಶದ ನೇಪಥ್ಯ ಸೂತ್ರಗಳಿಗಾಗಿ ಮಾತ್ರ ಅಷ್ಟೊಂದು ಸಾಮಗ್ರಿಯು ನಾಗವರ್ಮನಲ್ಲಿ ಸಿಕ್ಕಲಿಲ್ಲ. ಅಲ್ಲದೆ ಈ ಅವತರಣಕ್ರಮವನ್ನು ಕೇವಲ ನೇಪಥ್ಯ ಸೂತ್ರಗಳಲ್ಲಿ ಮಾತ್ರ ಯೋಜಿಸಿದೆ. ಅದಕ್ಕೂ ನಾನು ಬರೆದ ಪ್ರವೇಶಗಳಿಗೂ ಯಾವ ಸಂಬಂಧವೂ ಇಲ್ಲ.

ಮೂಲ ಕಥೆಯ ಸಾರಾಂಶವನ್ನು ಇಲ್ಲಿ ಕೊಟ್ಟಿದ್ದೇನೆ. "ಇಲ್ಲಿಯ ಕಥಾನಾಯಿಕೆಯರಿಬ್ಬರೂ ದೇವವರ್ಗದವರು. ಮಹಾಶ್ವೇತೆಯು ಹಂಸ ನೆಂಬ ಗಂಧರ್ವನ ಹಾಗು ಗೌರಿಯೆಂಬ ಅಪ್ಸರಿಯ ಮಗಳು; ಕಾದಂಬರಿಯು ಚಿತ್ರರಥನೆಂಬ ಗಂಧರ್ವ ರಾಜನ ಕುವರಿ. ಪುಂಡರೀಕ–ಚಂದ್ರಾಪೀಡರು ಇವರ ಪತಿಗಳು. ಇವರು ಮಾನವರಾದರೂ ದೇವಾಂಶವಿದ್ದವರು. ಚಂದ್ರನು ಪುಂಡರೀಕನಿಂದ ಶಾಪ ಹೊಂದಿ ಚಂದ್ರಾಪೀಡನಾಗಿ ಹುಟ್ಟು ವನು. ಕಾದಂಬರಿ–ಚಂದ್ರಾಪೀಡರ ನಡುವೆ ಪರಸ್ಪರ ಪ್ರೀತಿಯು ಬೆಳೆ ಯುವದು. ಆದರೆ ತನ್ನ ಗೆಳೆಯನು ದುಃಖಕ್ಕೀಡಾದುದನ್ನು ತಿಳಿದ ಕೂಡಲೆ ಕಾದಂಬರಿಯನ್ನು ಲಗ್ನವಾಗುವದಕ್ಕಿಂತ ಮುಂಚೆ ಚಂದ್ರಾ ಪೀಡನು ದೇಹತ್ಯಾಗ ಮಾಡುವನು; ಶೂದ್ರಕ ರಾಜನಾಗಿ ಹುಟ್ಟುವನು.

ಶಾಪವಿಮೋಚನೆಯಾದ ಬಳಿಕ ತನ್ನ ಚಂದ್ರಾಪೀಡ ದೇಹವನ್ನು ಪಡೆದು ಕಾದಂಬರಿಯನ್ನು ಮದುವೆಯಾಗುವನು. ಇತ್ತ ವಿರಹತಾಪದಿಂದ ಚಂದ್ರನ ಕಾಟಕ್ಕೆ ಈಡಾಗಿ ಮರಣ ಹೊಂದಿದ ಪುಂಡರೀಕನು ಚಂದ್ರನು ಚಂದ್ರಾಪೀಡನಾಗಿ ಹುಟ್ಟಿದಾಗ ಅವನ ಸ್ನೇಹಿಗನೂ ಮಂತ್ರಿಕುವರನೂ ಆದ ವೈಶಂಪಾಯನನಾಗಿ ಹುಟ್ಟುವನು. ಮಹಾಶ್ವೇತೆಯನ್ನು ನೋಡಿದಾಗ ಪೂರ್ವ ಜನ್ಮ ಸಂಸ್ಕಾರ ಬಲದಿಂದ ಅವಳ ವಿಷಯವಾಗಿ ವೈಶಂಪಾಯನನಲ್ಲಿ ಮೋಹವು ಉಂಟಾಗುವದು. ಇವನು ಪರಪುರುಷನೆಂದು ತಿಳಿದ ಮಹಾಶ್ವೇತೆಯು "ಶುಕವಾಗಿ ಹುಟ್ಟೆಂ"ದು ವೈಶಂಪಾಯನನನ್ನು ಶಪಿಸುವಳು. ವೈಶಂಪಾಯನನು ಗಿಳಿಯಾಗಿ ಹುಟ್ಟಿ ಶಾಪವಿಮೋಚನೆಯಾದ ಮೇಲೆ ಮರಳಿ ಪುಂಡರೀಕನಾಗಿ ಮಹಾಶ್ವೇತೆಯನ್ನು ವರಿಸುವನು.

ಪುಣೆ
೧೦–೧೧–೩೪ } ವಿನಾಯಕ

# ಮಹಾಶ್ವೇತೆ

## ದೃಶ್ಯ ೧

[ದೃಶ್ಯ: ಕೈಲಾಸಶಿಖರದ ಬಳಿಯಲ್ಲಿರುವ ಅಚ್ಛೋದ ಸರೋವರದ ಸುತ್ತಲಿನ ಪ್ರದೇಶ. ಅಲ್ಲಿ ಲಲಿತ ಲತಾಗೃಹಗಳ ನಡುವೆ ಒಂದು ಸಿದ್ಧಾಯತನವಿರುವದು. ಅದರಿಂದ ಕಿಂಚಿತ್ ದೂರದಲ್ಲಿ ಕಾಲದ ಮಬ್ಬಿನಂತೆ ಹಬ್ಬಿದ ತಮಾಲವನಗಳ ಮಧ್ಯದಲ್ಲಿ, ಭೃಂಗಾಳಿಯ ಗಾನದಿಂದ ನಿತ್ಯವಾಗಿ ಮಧುರವಾಗುತಿರುವ ಪುಷ್ಪಲತಾಗೃಹಗಳಿಂದ ಶೋಭೆವೆತ್ತು, ಚಂದ್ರಿಕಾಜಾಲದಂತೆ ಸುರಿದು ಬರುವ ನಿರ್ಝರಾಸ್ಫಾಲನಶೀಕರದಿಂದ ಅಲಂಕೃತವಾದ ಒಂದು ಗುಹೆಯು ಕಾಣುತ್ತಿದೆ. ಆ ಬೃಹದ್ಗುಹಾಂಗಣದಲ್ಲಿ ಎರಡು ಸುರಿಭೂಜವಲ್ಕ ವಸನಗಳು, ಒಂದು ದಂಡ, ಒಂದು ಜೋಗವಟ್ಟಿಗೆ, ಒಂದು ಕಮಂಡಲು, ಒಂದು ಭಸ್ಮಶಿಕ್ಯ, ಶಶಿಮಂಡಲಾಕೃತಿಯನ್ನು ತಳೆದ ಒಂದು ಶಂಖದ ಪಾತ್ರೆ,—ಇಷ್ಟು ವಸ್ತುಗಳು ಕಂಡುಬರುವವು. ಭಿಕ್ಷಾಪಾತ್ರೆಯ ತುಂಬ ಅಮೃತರಸಸ್ವಾದುಗಳಾದ ಫಲಗಳಿರುವವು.

ಗುಹಾಂಗಣದಲ್ಲಿಯೇ ತುಸು ಮೇಲಕ್ಕೆ ತೂಗು ಹಾಕಿದ ಕನತ್ಕನಕ ಪಂಜರದಲ್ಲಿ ಒಂದು ಗಿಳಿಯಿದೆ. ಗಿಳಿಗಾಗಿ ಕೇವಲ ಶಯ್ಯಾಗಾರವೊಂದೇ ಈ ಪಂಜರದ ರಚನೆಯಾಗಿದೆಯೆಂದು ಹೇಳಬಹುದು. ಏಕೆಂದರೆ ಅದಕ್ಕೆ ದ್ವಾರವಿಲ್ಲ. ಒಂದು ಮಗ್ಗಲು ಯಾವಾಗಲೂ ತೆರೆದೇ ಇದೆ. ಈ ತೆರೆದ ಭಾಗಕ್ಕೆ ಹೊಂದಿ ಒಂದು ನೀಳವಾದ ಅಗಲವಾದ ಚಿನ್ನದ ಹಲಿಗೆಯಿದೆ. ಈ ಗಿಳಿಯ ಹೆಸರು ವೈಶಂಪಾಯನ. ಅದಕ್ಕೆ ಅತಿಸ್ಪಷ್ಟವರ್ಣ ಸಂಸ್ಕಾರವಿರುವ ವಾಣಿಯಿದೆ. 'ಸಕಲಾಂಗನೇವವಿದಾ' ಮುಂತಾಗಿ ಅದರ ವರ್ಣನೆಯೇ ಇದೆ.

ಆ ಪಂಜರದ ಹತ್ತಿರ ಒಂದು ಶಿಲಾಪಟ್ಟದ ಮೇಲೆ ದಿವ್ಯ ತಪಸ್ವಿನಿಯಾದ ಮಹಾಶ್ವೇತೆಯು ಕುಳಿತಿದ್ದಾಳೆ. ಕೈಯಲ್ಲಿ ಒಮ್ಮೆ ಪುಂಡರೀಕನು ಧರಿಸುತ್ತಿದ್ದ ಅಕ್ಷಾವಳಿಯುಂಟು. ಒಮ್ಮೆ ಬನದ ಕಡೆಗೆ, ಒಮ್ಮೆ ಗಿಳಿಯ ಕಡೆಗೆ ನೋಡುತ್ತ ಮಹಾಶ್ವೇತೆಯು ಆಲೋಚನಾಪರಳಾಗಿ ಕುಳಿತಿದ್ದಾಳೆ. ಮತ್ತೊಮ್ಮೆ ಚಂದ್ರಾಪೀಡನ ಜಡದೇಹವನ್ನು ರಕ್ಷಿಸುತ್ತ ಕಾದಂಬರಿಯು ಕುಳಿತ ದಿಕ್ಕಿನೆಡೆಗೆ ದಿಟ್ಟಿಯನ್ನು ಚೆಲ್ಲುವಳು.

ವಸಂತಕಾಲವಾಗಿದ್ದುದರಿಂದ ವಿರಹಿಣಿಯರ ನೋವು ಹೆಚ್ಚುತ್ತಲಿದೆ. ಬನದಲ್ಲಿಯ ಅಶೋಕ ವೃಕ್ಷಗಳು ಕೆಂದಳಿರನ್ನು ತಳೆದಿವೆ. ಲತಾವಳಿಗೆ ಲಾಸ್ಯಾರಂಭವನ್ನು ತಂದುಕೊಡುತ್ತ,

ಅಚ್ಛೋದ ಸರೋವರದ ಸರ್ವೋತ್ಪಲಪ್ರಸರದಲ್ಲಿ ದಿವ್ಯಾಮೋದವನ್ನು ಹೊಂದುತ್ತ ತಣ್ಣೆಲರು ಊದುತ್ತಿದೆ. ಮಧುಪ್ರಾಕಾಳಿಯೂ ಮದೋತ್ಕಕೋಕಿಲ ಕದಂಬಕವೂ ವಿಜೃಂಭಿಸುತ್ತಿರಲು ಇಳೆಯನ್ನು ನೋಡಲು ರಸಾತಳದಿಂದ ತಲೆಯೆತ್ತಿದ ನಾಗರಾಜನ ಹೆಡೆಯಲ್ಲಿ ಹೊಳೆವ ಅರುಣಕಿರಣಮಣಿ ಮಂಡಲದಂತೆ ಇಂದುಮಂಡಲವು ಉದಯಿಸುವದು. ಕ್ಷಣಮಾತ್ರದಲ್ಲಿ ಆಗಸವನ್ನು ಸುಧೆಯಿಂದ ಲೇಪಿಸುವಂತೆ ಉರ್ವೀಚಕ್ರವನ್ನು ಪಯಃಪ್ರಸರಾಪೂರದಲ್ಲಿ ತೇಲಿಸುವಂತೆ, ದಸೆಗಳನೆಲ್ಲ ಚಂದನಾಸಾರದಿಂದ ಮುಸುಕುವಂತೆ ಬೆಳ್ವೆಳಗು ರೋದೋಂತದಲ್ಲೆಲ್ಲ ಹಬ್ಬುವದು.

ಆಗ ಗುಹೆಯ ಒಳಭಾಗದಲ್ಲಿ ತರಳೆಯು ಮಲಗಿರುವದು ಕಂಡುಬರುವದು.

ಗುಹೆಯ ಎದುರಿನಲ್ಲಿರುವ ಶಾಲ್ಮಲ ವೃಕ್ಷದಮೇಲೆ ಒಂದು ಗಿಳಿವಿಂಡು ಕುಳಿತಿರುವದು. ಹತ್ತಿರದ ಮರಗಳ ಮೇಲಿಂದ ಕೆಲವು ಕೋಕಿಲಗಳು ಕುಕಿಲುತ್ತಿರುವವು.)

**ಒಂದು ಕೋಕಿಲ:**

ಮೇಲೆ ಬಂದ ಚಂದ್ರಮಾ!
ಬಾರೆ! ಬಾ! ಮನೋರಮಾ!
ಮರದ ತುದಿಗೆ ಕೂಡುವಾ!
ಒಂದು ಹಾಡ ಹಾಡುವಾ!
ಬಾರೆ! ಬಾ! ಮನೋರಮಾ!
ಮೇಲೆ ಬಂದ ಚಂದ್ರಮಾ!

(ಹಾರಿಹೋಗುವದು).

**ಗಿಳಿವಿಂಡು:**

ಮರದಲ್ಲಿ ಮಲಗುವದು, ಮುಗಿಲಲ್ಲಿ ತಿರುಗುವದು,
ಅಲೆಯುವದು ನಮ್ಮ ಹಿಂಡು!
ಹೆಣ್ಣಿಹೆವು; ಗಂಡಿಹೆವು; ಗಿಳಿ—ಮಾನವರ ನಡುವೆ
ಮತ್ತೇಕೆ ಹೆಣ್ಣು—ಗಂಡು?
ನಾವು ಗಳಹುವೆವೆಂದು ಗಳಪುವನು ಮಾನವನು;
ನುಡಿಯಲಾವನಿದನಿಯಲಿ
ತಳಿರುಡೆಯ, ಹೂಮುಡಿಯ ತಳೆಯುತ್ತ ಮಾಮರವು
ನಿಮಿರುವದು ನನೆಕೊನೆಯಲಿ.

ಓದಿ ಪಂಡಿತವಕ್ಕಿಯಾಗದಿರೆಲೇ; ಹಕ್ಕಿ !
ಜಾತಿಗಿಹ ಪ್ರೀತಿಯಿರಲಿ!
ಮನುಕುಲದ ದನಿಗೇಳಿ ಶುಕಸಂಕುಲದ ಬರವ
ಮರೆವುದರ ಭೀತಿಯಿರಲಿ!
ಮನವಿದ್ದೊ ಇಲ್ಲದೆಯೊ ಸೇರಿರುವೆ ಗುಹೆಯನ್ನು;
ನಿಂತು ಯೋಗಿನಿಯ ಬಳಿಗೆ !
ರೆಕ್ಕೆಗಳು ಜೋಲ್ದಿಹವು, ಪುಚ್ಛಗಳು ಕಂದಿಹವು;
ನಿಂತಿರುವದಲ್ಲೊ ಬೆಳಿಗೆ!
ಹಸಿಮುರ್ಗರಿವ ಮೆಯ್ಯೆಲ್ಲ ಹಸೆಗೆಟ್ಟು ಹೋಗಿಹುದು;
ದೆಸೆಗೆಟ್ಟು ಹೋಗಬೇಡ!
ಹಿಂಡಿನಲಿ ಭೂರಮೆಯು, ಇಹಳಾ ಮನೋರಮೆಯು!
ಇವರ ಗೀಳ್ಮಾಡಬೇಡ !
ಬೆಳಗು ಬಹ ಜಾವದಲಿ, ಒಂದು ಸದ್ಭಾವದಲಿ,
ಗಿಳಿಯೆಂಬ ಹೇವದಿಂದ
ತಳಿರ್ಗೆಂಪು ಕಾವಣದಿ ನಿನಗಾಗಿ ಕಾದಿಹೆವು;
ಬಾ! ಬಾರೊ! ಜೀವದಿಂದ!

(ಹಾಡಿಕೆ, ಮುಗಿದು)

**ವೈಶಂಪಾಯನ:**

(ಪಂಜರದಲ್ಲಿ ರೆಕ್ಕೆಗಳನ್ನು ಬಡೆದು ವ್ಯಾಕುಲಗೊಳ್ಳುತ್ತ)

ಮಹಾಶ್ವೇತೆ!
ಕೊಲ್ಲೆನ್ನ ಕಮಲನಯನೆಯೆ! ಇಲ್ಲದಾಗಿಸು!
ಜಾತಿಸ್ಮರವಿದು ವಿರಕ್ತಿಗೆ ಹೇತುವೆಂಬುಸಿರು
ಬಯಲಾಗುತಿದೆ. ಸ್ಮರನ ತಾಪಕೆದೆಯುರಿಯುತಿದೆ.
ಮುನಿಯುಸಿರಿನಿಂದ ತಿಳಿವಂಕುರಿಸುವದಕಿಂತ
ಮೊದಲೆನ್ನ ಜನಕನನು ಮುರಿದೊಗೆದ ಮುದಿವೇಹ
ನೆನ್ನೇತಕುಳಿಸಿದನೊ! ಇನಿತರೊಳು ಕಾದಲ್ಕೆ

ಪರಿಪೂರ್ಣವಿರುತಿತ್ತು. ಪುಂಡರೀಕನೆ ಆಗಿ
ನಿಷ್ಫ ಮರೆ ಹೊಗುತಿದ್ದೆ, ಕೊಂದು ಸಲಹುವದೀಗ!

**ಮಹಾಶ್ವೇತೆ:**

(ದುಃಖದಿಂದ)

ತಾಳ್ಮೆಯಿರಲೆನ್ನೊಡೆಯ!
ಎರಡು ಕೊಲೆಗಳ ಪಾಪವೆನ್ನುಡಿಯಲಿರುತಿರಲು
ಅದ ಹೆಚ್ಚಿಸುವದಿದೆಯೆ! ನಿಮ್ಮನಗಲಿಸಿ ಕೊಂದೆ.
ಎನ್ನ ಪ್ರವಾಸೆಯಿರೆ ಸಾಗಿಬರುತಿಹ ನಿಮಗೆ
ಶಪಿಸಿ ಸಾಯಿಸಿ ಬಿಟ್ಟು ಗಿಳಿಯ ರೂಪವನಿತ್ತೆ.
ಇನ್ನೇನನೆಸಗುವದು ತನ್ನ ಸಲುವೆಯ ಮಿಡಿಯ
ತಾನೆ ತಿರಿದಿಹ ಪಾಪಿ? ತಾಯಿ ಲಕ್ಷ್ಮೀದೇವಿ
ಮರುಹುಟ್ಟ ತಳೆದು ಶೂದ್ರಕನಾಗಿ ಬಾಳುತಿಹ
ಚಂದ್ರನನು ಕಂಡು ಸತ್ಯವನರುಹಿ ತನ್ನ ನಿಜ
ಮಂಡಲವನುಗುವಂತೆ ಅನಿತರೊಳು ಗೆಯ್ದೆಮ್ಮ
ಕೋಟಲೆಯ ನೀಗಿಸುವಳೆಂದಾ ಕಪಿಂಜಲರು
ಅಭಿವಚನವಿತ್ತಿಹರು. ಮತ್ತೆ ನಿಮ್ಮಯ ತಂದೆ
ಎಸಗುತಾಯುಷ್ಕಾಮಹೋಮವನು ಕಾಮಿತಾ-
ರ್ಥವನು ಪೂರೈಸಲೆಂದನುಗೊಳುತಿಹರು ನಿತ್ಯ.
ಇಂದು ಮಂಡಲದೊಳಿಂದಿಗು ಕಾಂತಿಗೊಳುತಿರುವ
ದೇಹವನು ತಳೆದು ನೀವ್ ಬರುವದನು ಕಣ್ಣಾರೆ
ಕಾಣ್ಬ ಪರ್ವದ ಗಳಿಗೆ ಬರಬಹುದು, ನಲ್ಲ!

**ವೈಶಂಪಾಯನ:**

ಉದಿಸುವ ಸುಧಾಸೂತಿಬಿಂಬದೆಡೆಯಿಂದಾಗ
ಬಂದ ಧ್ವನಿಯನು ನಂಬಬೇಕೆಂದು ನುಡಿಯುತಿಹೆ.
ಇತ್ತ ಜಾಬಾಲಿಗಳು ಕಾಮಿತ್ವದಿಂದಾನು
ದೇವತ್ವಗೆಟ್ಟಿರುವೆನೆಂದು ತಿಳಿಹೇಳಿದರು.

ಬೇಟೆವೆಸಗುವವರು ಗುರುತಿಸಿಲ್ಲವು, ಬಾಲೆ!
ಶ್ವೇತಕೇತುಕುಮಾರನಾಗುತ, ಮಹಾಶ್ವೇತೆ!
ನಾ ನಿನ್ನ ಪ್ರೀತಿಸಿದೆ; ಫಲ ಬಂದುದಿಲ್ಲದಕೆ.
ಕ್ರೋಧಮುಪೇಕ್ಷೆಗೆ ನನ್ನ ತಪಸ್ಸು ಸಾಲದೆ ಹೋಯಿತು.
ಅದಕಂತೆ ಗಿಳಿಯಾಗಿ ಹೊರಳಿಯುವೆನು. ಅಕಟಕಟ!
ರತಿಕಾತರೊಲುಮೆಗಳ ತೋರಿಸು ನಿಂತಿಹವೆನ್ನು.
ನೋಯಿಸುವೆನು ನೂರು ಸಲ, ನಲ್ಲೆ! ನಿನ್ನಯ ಪ್ರೀತಿ
ಮೀರಿಪುದಿರೆ, ನನ್ನನನ್ನು ಮುಪ್ಪತಲೆಂದು
ಪಂಜರದ ಬಳಿ ನಾನು, ಶುಕದೇಹವನು ಕಂಡು
ಪುಚ್ಛ ಬರೆ, ಕಂಗೆಟ್ಟು ಕರಕಮಲವಿಡುವೆತ್ತ
ಉದ್ಬಾಷ್ಪ ದೃಷ್ಟಿಯಿಂದೆನ್ನ ಮೊಗವನು ನೋಡಿ
ಕಿರುಳನಿನ್ನಯ ಮೈಯ್ಯ ತೂಗಾಡಿಸುವಂತೆನ್ನ
ತಲೆಯ ಮೇಲೆನ್ನ ಕಾಲ್ಗಳನಿಟ್ಟು ರೋದಿಸಿದೆ;
ತೊಡೆಯಮೇಲೆನ್ನ ಕೂರಿಸಿಕೊಳುತ ನೊಂದಿರುವೆ.
ಈಗ ನನ್ನಕ್ಷಮಾಲೆಯು, ದಂಡಪಾತ್ರೆಗಳ
ಕೊಳುತ ಯೋಗಿನಿಯಾದ ಕಮಲಲೋಚನೆ! ನಿನ್ನ
ಗಿಳಿಯಂತೆ ನಿರುಪಾಯನಾಗಿ ಕಾಣುವದೆನಗೆ
ಶುದ್ಧ ರವರವ ನರಕ! ಬಾಳು—ಮಸಣದ ಬೀಡು!

**ಮಹಾಶ್ವೇತೆ:**

(ಕಣ್ಣೀರು ಸುರಿಸುತ್ತ)

ತಾಳುವದು ನನ್ನೊಡೆಯ!
ನಿಮ್ಮಕ್ಷಮಾಲೆಯನು ಪಡೆದು ಧರಿಸಿರುವಂತೆ
ನೀವಿತ್ತ ಪುಷ್ಪಮಂಜರಿಯನೊಳಕೊಂಡಿಹೆನು.
ಅಶರೀರರಿರಲು ಬಯಸುವ ಜಗದ ಕಾದಲರು
ಆತ್ಮಗಳ ಕೂಟವೊಂದಿರಲೆಂದು ದೇವನೆಡೆ
ಮೊರೆಯಿಟ್ಟುದರಿತಿಹೆನು. ಸಾಧಿಸಿಹೆವಾವದನು.

ದೇಹಗಳ ಪರಮೈಕ್ಯವೆಮಗೆ ಸಂಧಿಸದಿರಲು
ವಿವಿಧ ಜೀವಾಲಾಪನೆಯಲಿ ಕಾಲವ ಕಳೆದು
ಪ್ರೇಮದಮೃತವನಷ್ಟೆ ಮನಗಾಣಲೆಳಸುವೆವು.

**ವೈಶಂಪಾಯನ:**

(ಆಕ್ರೋಶದಿಂದ)

ಅಯ್ಯೋ! ಇದು ಬರಿ ಹುಚ್ಚು! ಸಿಗ್ಗಿಲ್ಲದರ ನೆವವು!
ಕಾಮದಿಂದೆನ್ನ ದೇವಾಂಶವಳಿದಿಹುದೆಂಬ
ನುಡಿಗೇಳಿ ಗಿಳಿಯಾದುದೊಂದು ಚೆನ್ನಾಯ್ತೆಂದು
ಹಾರಿ ನಿನ್ನೆಡೆ ಬಂದು ಮೋಹವಿನಿಸಿಲ್ಲದಲೆ
ಅಸುವಿನೊಲುಮೆಯನೆಸಗಿ ಎನಿತೊ ದಿನ ಬದುಕಿದೆನು.
ನಿನ್ನೊಡನೆ ಸಂಕಥಾ ವೇದಗಳನೋದಿದೆನು.
ಆಗ ಎದೆಯೊಲವಣಕಿಸುತ್ತ ನುಡಿದಿತು ನನಗೆ:
"ಎಲ್ಲಿ ನಿನ್ನಯ ಪ್ರೇಮ?" ಲತೆಗಳನು ತೀಡುತಿಹ
ಸುಯ್ಯೆಲರು ಕೇಳಿತ್ತು: "ಏಕೆ ವೇದದ ಮಂಕು?"
ಪಸಲುಗವಿದಿಹ ಬನದೊಳಿರುವ ಶುಕಸಂಕುಲವು
ಉಸುರಿತ್ತು: "ಇಲ್ಲಿ ಬಾ! ಗಿಣಿರಾಮ! ನಾವಿಹೆವು!"
ವೇದಶಾಸ್ತ್ರವನೆಲ್ಲ ಮರೆಯಲೆಳಸಿದೆನಂದು.
ಮಾತೆಸಗಿ ಮಾತೆಸಗಿ ಬೇಸರಿಟ್ಟಿತು ಮನವು.
"ಮಾತಿನಲಿ ಮೋದವಿದೆಯೆಂದು ತಿಳಿದ ಪ್ರವೀಣ!
ಮಾತೆಸಗು. ನಾವಿಂತು ಇಂಚರವನೆಸಗುವೆವು"
ಎಂದು ಪಿಕ ಹಾಡಿದವು. ಮಿಗಿಲಾಯ್ತು ರಣರಣಕ.
ತವಸಿಯಾಗುತ ನಿನ್ನೊಳೊಸೆದು ಪ್ರಾಣವ ತೊರೆದು
ನವೆದು ನಿಂತಿಹ ನಾನು ಮಾತಿನಲಿ ಪ್ರೇಮವನು
ಕಾಂಬುದೆ, ಮಹಾಶ್ವೇತೆ? ಕೃತಕ ಪ್ರೀತಿಯು ಸಾಕು,
ಕೊಲ್ಲೆನ್ನ! ಕಮಲನಯನೆಯೆ! ಇಲ್ಲದಾಗಿಸು!

**ಮಹಾಶ್ವೇತೆ:**

(ದುಃಖವು ಮಿತಿಮೀರಿ ಎದ್ದು ಗಿಳಿಯ ಪಂಜರದ ಬಳಿಗೆ ಹೋಗಿ)

ಅಹುದಹುದು, ನನ್ನೊಡೆಯ! ನನ್ನ ಬಳಲಿಕೆ ಇದುವೆ.
ಅಚ್ಚರಸೆಯಾದ ಗೌರಿಯ ತನುಜೆ, ನಾನಿಂತು
ನಿಮಗೊಲಿದ ಪರಿಯೇನು? ನಿಮ್ಮಂಥ ಮಾನವರ
ದಿವ್ಯಸ್ಪರ್ಶದಿ ಸ್ವರ್ಗ ತೂಗಿ ತೊನೆದಾಡುವದು.
"ಕಾದಂಬರಿಯು ನಿತ್ಯ ಕಾಂತಿಯುತವಾಗುತಿಹ
ಕಾದಲನ ದೇಹವನು ಎದುರಿರಿಸಿ ಪೂಜಿಸುತ
ಆತ್ಮವೈತರಲೆಂದು ಹಾರೈಸಿ ನೊಂದಿಹಳು;
ನನ್ನ ಬಾಳುವೆ ಚೆನ್ನು; ನನ್ನಿಕಾರನ ಜೀವ
ಶುಕವಾಗಿ ಮಾತನಾಡುವದೀಗ" ಎಂದಿದ್ದೆ.
ಸಂತಸವು ಹುಸಿಯಾಯ್ತು. ಬರಲಿರುವ ನಲ್ಲೊರೆಯ
ಮುಂಗುರುಳುಗಳ ತೀಡಿ ಕರಕಮಲಗಳ ತಟ್ಟಿ
ಬಾಳ್ವ ಕಾದಂಬರಿಯೆ ಧನ್ಯಳಲ್ಲವೆ, ನಲ್ಲ!
ನೀವಿಂತು ಗಿಳಿಯಾದಿರೆನ್ನ ಕರ್ಮದ ಬಲದಿ.
ಈಗ ನನಗಿಹುದೊಂದೆ:– ಪಾಪಕರ್ಮವು ಗೆಯ್ದ
ಘೋರಾಪರಾಧವನು ನೋಡಿ ಕಳೆಯದ ಬಾಳು!

(ಅಳುಕಳು)

**ವೈಶಂಪಾಯನ:**

ಅಳದಿರು, ಮಹಾಶ್ವೇತೆ! ರೋಹಿಣೀವಲ್ಲಭನ
ಶಪಿಸಿರುವ ದಿನವೆನಗೆ ಮನವರಿಕೆಯಾಗಿಹುದು!
ಕಣ್ಣೀರು ಸುರಿಸದಿರು, ಕುಪಿತನಾಗದಿರೆಂದು.
ಇದನರಿತ ಬಾಳುವೆಯು ಶಿಲೆಯಾಗುತಿದೆ, ಶಿಲೆಯು!
ನಾನೀಗ ಶುಕವಲ್ಲ, ಹರಿತ ಶಿಲೆಯೊಂದು ಮರಿ.

**ಮಹಾಶ್ವೇತೆ:**

(ಅಳುತ್ತ)

ಹಾಗಲ್ಲ, ಮನದರಸ! 'ಅರಗಿಳಿಯೆ! ಬಾರೆ'ಂದು
ನೀವೆನ್ನ ಚೆಲುವಿಕೆಯ, ನಿಡಿದೋಳ್ಗಳಲಿ ತೂಗಿ

ಕುಣಿಸುತಿರಬೇಕಿತ್ತು! ನೀವೆ ಗತಿಯಾದರು!
ತಂಗಳಾವಣ್ಯದಲಿ ಮನ್ಮಥನ ದೊರೆವೆತ್ತ
ನಿನ್ನ ಮುಂಗೈ ಮೇಲೆ ರತಿಯಂಥ ಸಾರಿಕೆಯು,—
ನಾ ನಲಿಯಬೇಕಿತ್ತು. ಹಾ! ದುರ್ವಿಪಾಕವೆ!
ಇಂತೀಗ ಪಂಜರದೊಳಿಟ್ಟು ನಿನ್ನನು ನಲಿಸಿ
ಪಾಲಿಪಂತಹ ಸಮಯ ಬಂದಿತೇ, ವಿಧಿಯೆ!

**ವೈಶಂಪಾಯನ:**

ಪಂಜರದಲಿಹೆನೆಂದು ನೋಯದಿರು, ಮನದನ್ನೆ!
ಅದು ನನ್ನ ಬೇಟಕೆಯು. ಪಂಜರದ ಬಳಿಸಾರಿ
ನೀನಿಂತು ನಿಂತಿರಲು ನೀನೊಂದು ಶುಕವೆಂದು
ಬಂದು ಕ್ಷಣವಾದರೂ ಬಗೆಯುವೆನು. ನಿನ್ನಳಿದ
ದೇಹಸೌಷ್ಠವಗಳನು ಕಾಣದಲೆ ಮೊಗವೊಂದೆ
ತೋರುತಿರೆ:—ನಿನ್ನ ಮೂಗಿನ ತೆನೆಯು, ತುಟಿಗೆಂಪು,
ನೊಗದ ನರೆಯು ತಂಪು, ಕಣ್ಣ ನೀರಿಲ್ವಣ್ಣ—
ನನುಭವನು, ಶುಕಕುಲದ ಪ್ರೇಮರಾಜ್ಯವಿದೆಂದು
ಕನಸಿನಲಿ ನಿಲ್ಲುವೆನು. ನಿನ್ನ ಮುಖಚಂದ್ರಮನೆ
ನೀನೆಂದು ತಿಳಿಯುವೆನು. ಆದರೆ, ಮಹಾಶ್ವೇತೆ!
ಕನಸು ಕ್ಷಣಭಂಗುರವು. ನಾನು ಮಾನವನಾಗಿ
ಜನ್ಮಂದು ಜನಿಸುವೆನೊ! ಇಲ್ಲದರೆ ಶುಕವಾಗಿ
ನೀನೆನ್ನನನುಸರಿಸು. ಬನಬನಗಳಲಿ ತಿರುಗಿ
ಮನದಣಿಯೆ ಪ್ರೀತಿಸುವ. ಆಗಸಕೆ ಗುರಿಯಿಟ್ಟು
ಸೃಷ್ಟಿಯಿಲ್ಲದ ದೆಸೆಗೆ ಸೃಷ್ಟಿಯನು ವಿರಚಿಸುವ!

**ಮಹಾಶ್ವೇತೆ:**

(ದುಃಖದಿಂದ)

ಬೇಡ, ಬೇಡೆನ್ನ ದೊರೆ! ಮನದ ಜ್ವಾಲಾಮುಖಿಯ—
ನಿಂತು ಕೆರಳಲು ಬೇಡ. ಸಂಕಟಕೆ ಕಾರಣವು!
ಉಸುರುತಿಹುದೊಳದನಿಯದೊಂದು: ತುಸು ತಡೆಯೆಂದು!
([illegible])

**ವೈಶಂಪಾಯನ:**

ತಡೆಯೆನು, ಮಹಾಶ್ವೇತೆ! ನೋಡಿತ್ತ! ಚಂದ್ರಮನ
ಹಾವಳಿಯು ಥಳಿರೆಂದು ಕರೆಯುತಿದೆ, ಸುರಿಯುತಿದೆ.
ಬಂದೆನಿಗೋ! ಎಲೆ ಚಂದ್ರಹತಕ! ನಿನ್ನೆಡೆ ಬಂದೆ!
ನನ್ನ ದೇಹವನಿಂತು ನೆರೆಯುರಿಸಿ ತೊಳಲ್ಬಡಿಸಿ
ಕಾಡುತಿಹೆ. ಸುಲಿಗೆಗೊಳುತಾ ನಿನ್ನ ಮಂಡಲವ
ನನ್ನ ದೇಹವ ಕೊಂಡು ಪೂತಾತ್ಮನಾಗುವೆನು!

[ಕಾಂತದಿಂದ ಹೊರಗೆ ಬಂದ ಗಿಳಿಯು ಆಕಾಶದಲ್ಲಿ ಹಾರಿ ಮುಗಿಲ ಮಧ್ಯದಲ್ಲಿ ತೇಲಿ ಬರುವ ಚಂದ್ರಮಂಡಲದೆಡೆಗೆ ಹೋಗಲೆಳಸುವುದು. ಆಗ ಮಹಾಶ್ವೇತೆಯು ಉನ್ಮಾದದಿಂದ ಗುಹಾಂಗಣವನ್ನು ಬಿಟ್ಟು ಓಡಿ ಬಂದು ಸೋಪಾನವನ್ನು ಹತ್ತಿ ಗಿಳಿಯ ಕಡೆಗೆ ಎರಡು ಕೈಗಳನ್ನು ನೀಡಿ ಆಕ್ರಂದಿಸುವಳು.]

**ಮಹಾಶ್ವೇತೆ:**

ಬೆದರದಿರು! ನನ್ನ ಪ್ರಾಣದ ಗಿಳಿಯೆ! ತೆರಳದಿರು!
ನೀನಿಲ್ಲದಿರೆ ಭೂಮಿ ಮಸಣವಟ್ಟಿಯು, ಮತ್ತೆ
ದಶದಿಶೆಗಳತಿ ಶೂನ್ಯ! ವಾಯುಪಥದಲಿ ಹಾರಿ
ಮೃತನಾಗಿ ಹೋಗದಿರು. ಎಲೆ ನೃಶಂಸನೆ! ಚಂದ್ರ!
ಪತಿದೇಹವನು ತುಡುಗಿನಿಂದೊಯ್ದು ಕುಟಿಲನಿಹೆ!
ಪತಿಪ್ರಾಣವನು ಮಾತ್ರ ಒಯ್ಯದಿರು. ಬಲು ಜೋಕೆ!

[ಹಾರಿಹೋದ ಸಾವಕಾಶವಾಗಿ ಗಿಳಿಯ ದೇಹವು ಮಾತ್ರ ಬಂದು ಮಹಾಶ್ವೇತೆಯ ಕೈಗಳಲ್ಲಿ ಬೀಳುವದು.]

ಇದು ಏನು? ರೆಕ್ಕೆಗಳು! ಪುಚ್ಚಗಳು! ಯಾರ ಗಿಳಿ?
ಇದು ಎಲ್ಲಿ ಪಯಣವನು ಬೆಳೆಸಿತ್ತು? ಹಾ! ತಿಳಿದೆ!
ನಲ್ಲ ಗಿಳಿಯಹನೆಂಬ ಕನಿಕರದ ಮನವಂದು
ಬೇಡಿತ್ತು. ಇಂದಿಗೋ! ಗಾಳಿಯಲಿ ಕೊಳಲೂದಿ
ರೂಪವಿಲ್ಲದೆ ಮನೋವಲ್ಲಭನ ಪ್ರಾಣಗಳು
ರುದ್ರನಾಟ್ಯವನೆಸಗಿ ಕರೆಯುತಿವೆ. ಏನೆನಲಿ?

ಬಿಳಿ ಮುಗಿಲನಪ್ಪಲೆ? ಬಯಲೆ ಶರಣೆನ್ನಲೆ?
ವಾರಿಧಿಯ ಬೀಳಲೆ? ಪೂರ್ತಿಗೊಳದಾಸೆಯು!
ಎಲ್ಲಿಹುದು ನಿನ್ನಮೃತಕಲಶವಿಹ ಮೂರ್ತಿ!

[ಮೂರ್ಛೆಹೋಗುವಳು. ತರಳಿಕೆಯು ಚೇತರಿಸಿಕೊಂಡು ಮಹಾಶ್ವೇತೆಯು ನಿಶ್ಚೇಷ್ಟಿತಳಾಗಿ ಬಿದ್ದ ತಾಣದೆಡೆಗೆ ಬರುವಳು.]

**ತರಳಿಕೆ:**

(ಸ್ವಗತ)

ಇದನೇನು ತಂದೆ, ವಿಧಿ! ದೇವಿಯೊರಗಿಹಳಲ್ಲ!
ಅಚ್ಚ ಬೆಳುದಿಂಗಳಲಿ ವಿರಹವೆಚ್ಚುತ್ತಿಹುದು.
ಇನ್ನೆನಿತು ಸಹಿಸಬೇಕೆಂದಿಹುದೊ ದೈವಲಿಪಿ!
ಗಿಳಿಯಾಣ್ಮನಿಲ್ಲೇಕೆ? ಅಹಹ! ಮೃತನಾಗಿಹನು.
ಅದಕಂತೆ ದೇವಿಗೀ ಪರಿತಾಪ ಬಂದಿಹುದು.

[ಹತ್ತಿರವಿದ್ದ ಒಂದು ಕೊಳದಿಂದ ನಳಿನೀಪತ್ರಪುಟದಲ್ಲಿ ನೀರನ್ನು ತಂದು ಮಹಾಶ್ವೇತೆಯ ನಾಸಿಕದ ಮೇಲೆ, ಮೋರೆಯ ಮೇಲೆ, ಮೆಲ್ಲನೆ ನೀರೆರೆಯುವಳು.]

ಕೈಯಲುಗಿಸಿದಳಲ್ಲ! ಸಭಕೆ ನೆಗೆದವಳುಸಿರು
ಮನೆ ಸೇರುತಿದೆ ಮತ್ತೆ. ಚೇತರಿಸಿಕೊಳು, ತಾಯೆ!

[ಉಪಚರಿಸುವಳು. ಆಗ ಅಚ್ಛೋದ ಸರೋವರದ ಕಡೆಯಿಂದ ಮೆಲ್ಲನೆ ಕಾದಂಬರಿಯ ಸ್ವರವು ಕೇಳಿ ಬರುವದು.]

## ಕಾದಂಬರಿಯ ಹಾಡು

ನಿನ್ನ ಮೋರೆಯಲಿಹುದು ಗೆಳೆತನದ ಕಳೆಯು.
ನಿನ್ನ ಕಂಗಳಲಿಹುದು ನಲುಮೆಗಳ ಹೊಳೆಯು.
ಹೊಳೆಹೊಳೆವ ಕಾಂತಿಯನು ತಳೆದ ಸುಕುಮಾರ!
ನಿನಗಾಗಿ ಕಾಯುತಿದೆ ರತುಸಗಳ ಹಾರ!

ಇಲ್ಲಿ ತಾನೊರಗಿಹುದು ಸುಕುಮಾರ ದೇಹ.
ಎಲ್ಲಿ ಮನೆಮಾಡಿಕೊಂಡಿರುತಿಹುದು ನೇಹ?
ದೇವನಿಲ್ಲದ ಗುಡಿಗೆ ಮರಗುವದು ಮನವು.
ಕಾವನಿಲ್ಲದೆ ತೀವಿ ಬಹುದು ಕ್ರಂದನವು.

ಪಲ್ಲವದ ಸೌಸವವು ನಿನ್ನ ತಳಿರಡಿಗೆ;
ಅದರ ನರುಗಂಪೆ ಸೋಂಕಿಹುದೆನ್ನ ಮುಡಿಗೆ.
ತಂಗದಿರ ಬಾರದಿಹನೇ ತಂಗುವನೆಗೆ?
ವ್ಯಂಗವಾಗಿಹುದೇನೊ ಆತ್ಮವದು ಕೊನೆಗೆ?

ಒರ್ವರಿಗೆ ಸ್ಫೂರ್ತಿಯಧಿವಾಸನವನಿತ್ತು
ಒರ್ವರಿಗೆ ಮೂರುತಿಯುಪಾಸನೆಯನಿತ್ತು
ನೋಡುತಿಹ ಮಾದೇವ! ಎಂದು ಬಹುದೊಸಗೆ?
ಎಂದೊದಗುವದು ಸ್ಫೂರ್ತಿ—ಮೂರ್ತಿಗಳ ಬೆಸುಗೆ?

**ತರಳಿಕೆ:**

(ಸ್ವಗತವಾಗಿ)

ದೇವಿ ಮೆಯ್ಮರೆದಳೆನೆ ಅತ್ತ ಕಾದಂಬರಿಯು
ಶೋಕಗೀತೆಯನುಸುರುತಿಹಳಿಂತು, ದೈವವೆ!
ಪ್ರಣಯಿನಿಯರೊಲವ ಗುರುತಿಸದನಿತು ಕ್ರೂರನಿಹೆ!

(ಮಹಾಶ್ವೇತೆಗೆ)

ಚೇತರಿಸಿಕೋ, ದೇವಿ! ಎದ್ದೇಳು. ಈ ದುಃಖ
ಕಡೆಯಿಲ್ಲದಂತಿಹುದು. ನಿನ್ನ ಮನ ಸ್ಥಿಮಿತವಿರೆ
ನಮಗೆಲ್ಲಿ ಸೈರಣೆಯು.

[ಗಿಳಿಯ ದೇಹವನ್ನು ಕಾಣದ ತಾಣದಲ್ಲಿ ಇರಿಸುವಳು]

**ಮಹಾಶ್ವೇತೆ:**

(ಕಣ್ದೆರೆದು ಎದ್ದು ಕುಳಿತು)

ಯಾರವರು! ತರಳಿಕೆ! ಈಗ ನಾವಿಹುದೆಲ್ಲಿ?

**ತರಳಿಕೆ:**

ತಿಂಗಳಿನ ಬೆಳಕಿನಲಿ ಅತಿ ಶಾಂತವಾಗಿರುವ
ಬನದಲಿಹ ಸಿದ್ಧಾಯತನದ ಬಳಿ, ದೇವಿ!

**ಮಹಾಶ್ವೇತೆ:**

(ಏಳಲು ಪ್ರಯತ್ನಿಸುತ್ತ)

ಅಹುದು ನಡೆ, ತರಳಿಕೆ! ಅಯ್ಯೋ! ಮತ್ತಿಲ್ಲೇನು!
ನಭವು ರಣಗುಟ್ಟುತಿದೆ. ಬನ ಹಾಳು ಸುರಿಯುತಿದೆ.

ತಿಂಗಳನ ಬೆಳಕಲ್ಲ, ಎದೆಯುಸುರಿಸುವ ಬಿಸಿಲು
ದೆಸೆಗಳನು ವ್ಯಾಪಿಸಿದೆ. ಹಾ! ನನ್ನ ಅರಗಿಳಿಯೆ!
ನಿನ್ನನಗಲದೆ ಇರುವ ಬಾಳುವೆಯು ಕನಸಾಯ್ತೆ?
[ಕುಳಿತಲ್ಲಿ ಹಾಗೆಯೇ ಕಣ್ಣೀರು ಸುರಿಸುವಳು.]

**ತರಳಿಕೆ:**

(ಸ್ವಗತ)

ಇನ್ನೇನನೆಸಗುವೆನು? ದೇವಿಯುರ ಸಂತಾಪ–
ವೆಂದಿಲ್ಲದಂತಿಂದು ಮೇರೆಯನು ಮೀರಿಹುದು.
(ಗಟ್ಟಿಯಾಗಿ)
ಪದಕೆ ಬಿನ್ನವಿಸುವೆನು; ತಾಳುವದು, ದೇವಿ!
(ದುಃಖಿಸುವಳು)

[ಅಚ್ಛೋದ ಸರೋವರದ ಕಡೆಯಿಂದ ಹರ್ಷಭರಿತೆಯಾದ ಮದಲೇಖೆಯು ಓಡುತ್ತ ಬರುವಳು.]

**ಮದಲೇಖೆ:**

ದೇವಿ! ಮಹಾಶ್ವೇತೆ!

**ಮಹಾಶ್ವೇತೆ:**

ಯಾರವರು? ಹೆಸರ-ದೆಸೆಯಿಲ್ಲದೆನ್ನನು ಕಂಡು
ಹೆಸರೆತ್ತಿ ಕೂಗುವರು!

**ಮದಲೇಖೆ:**

ನಾನಕ್ಕ, ಮದಲೇಖೆ! ಇಂದೆಲ್ಲ ಮುಗಿದಿಹವು
ದುರದೃಷ್ಟದಾಟಗಳು. ಸೋಜಿಗದ ಸಂಗತಿಯ–
ನರುಹಲಿಲ್ಲಿಗೆ ಬಂದೆ! ಒಂದು ಯಾಮವು ಕಳೆದು
ಚಂದ್ರನುದಿಸಿರೆ, ದೇವಿ ಕಾದಂಬರಿಯು ಶೋಕ
ಮಿತಿ ಮೀರಿ, ದೇಹವನು ತ್ಯಜಿಸುವದೆ ಲೇಸೆಂದು,
ಇಲ್ಲದಿರೆ ಮನದಾಣ್ಮನುಳಿಸಲೇಳುವನೆಂದು
ನೊಂತು ಬಿಗಿದಪ್ಪಿದಳು ನಲ್ಲನನು. ಮುನಿವರನ
ಹೋಮ ಮುಗಿದಿರಬೇಕು; ಅಲ್ಲದೆಯೆ ಶೂದ್ರಕನ

ವಿಸ್ಮೃತಿಯು ಕಳೆದಿರಲು ಸಾಕು ಲಕ್ಷ್ಮೀದೇವಿ:
ಏನಿಹುದೊ ಕಾಣೆ. ಕಂಬನಿ ಸುರಿಸುತಿರಲಾವು
ನಿದ್ರೆ ತಿಳಿದಂತೆದ್ದ ದೇವ ಚಂದ್ರಾಪೀಡ;
ಲತೆಯಂತೆ ಸುತ್ತಿದಳು ಕಾದಂಬರೀ ದೇವಿ !
ಇಂತಿರುವ ಸುಖಕೆ ಬರುವಾನಂದ ಮಿಗಿಲೆಸಲು
ಇಂದುಮಂಡಲದಿಂದ ದೇವಯಾನದಲಿಳಿದು
ಅಮೃತದೇಹನು ಬಂದ, ದೊರೆ ಪುಂಡರೀಕ!
ಕಂಬನಿಯ ಮಿಡಿ, ತಾಯೆ; ಚಿಂತೆ ಮಾಣ್ದಿಹುದಿನ್ನು.
ಇಲ್ಲಿಗೈತರುತಿಹನು ದೊರೆ ವಾಯುವೇಗದಲಿ.

(ನಿಡಿದೋಳ್ಗಳನ್ನು ಮುಂದುವರಿಸಿದ ಪುಂಡರೀಕನು ಲಗುಬಗೆಯಿಂದ ಬರುವನು.)

**ಪುಂಡರೀಕ:**

ತೋಳ್ಗಳನು ತಕ್ಕೈಸಿ ಭೂಮಿವ್ಯೋಮವ ತಿರುಗಿ
ಮನದ ಕಿಚ್ಚನು ನಂದಿಸಲು ಮುಂದುಗಾಣದೆಯೆ
ಮರುಹುಟ್ಟುಗಳ ಕಳೆದು ನಿನ್ನೆಡೆಗೆ ಬಂದಿಹೆನು.
ಅಂದಿನಾ ಕೋಪವನು ನಟಿಸದಿರು, ನಲ್ಲೆ!

(ಆಲಂಗಿಸಿ ಮುತ್ತಿಡುವನು.)

**ಮಹಾಶ್ವೇತೆ:**

(ಪುಂಡರೀಕನ ಮುಂಗುರುಳನ್ನು ತೀಡುತ್ತ)

ಮಂದಗಮನದ ಚಂದಕೊಂದು ಸಲ ಮಾರಿದೆನು
ನಲುಮೆಯನು, ಮತ್ತೊಂದು ಸಲ ಮುಳಿಸು ಬೀರಿದೆನು.
ಅಳಿಯದಿರಲೆಂದಿಗೂ, ನಲ್ಲ ! ನಿನ್ನಯ ರೂಪು !

**ಪುಂಡರೀಕ:**

ಅಮೃತಮಯ ಫಲಗಳನು ತಂದು ತಿನಿಸಿದ ಬಾಲೆ !
ಅಧರಾಮೃತವ ಪಾನ ಮಾಡಿ ಬಾಳುವೆನೀಗ,

ಅಮೃತಕಿರಣನ ಕಾಂತಿಯನು ದೇಹವಾಗಿಸುತ !
ಶೂನ್ಯವಾಗಿಹ ಭೂಮಿ ಲಲಿತವಾಯಿತು ಮತ್ತೆ !
ನಮ್ಮೀರ್ವರನುರಾಗವನು ಚಿತ್ರಿಸುವ ತೆರದಿ
ರೋದೋಂತವನು ಮುಸುಕಿ ನಸುಕು ಬರುತಿದೆ, ನೋಡು !

(ಹಿಂದೊಮ್ಮೆ ಪುಂಡರೀಕನು ವೈಶಂಪಾಯನನಾಗಿ ಬಾಳಿದ್ದಾಗ ಅವನಿಗಿದ್ದ ತಾಯಿತಂದೆಗಳು— ಶುಕನಾಸ ಮನೋರಮೆಯರು— ಬರುವರು. ತುಸು ಲಜ್ಜೆಯಿಂದ ಮಹಾಶ್ವೇತೆಯು ಬದಿಗೆ ಸರಿದು ನಿಂತು ನಮಸ್ಕರಿಸುವಳು.)

**ಶುಕನಾಸ ಮತ್ತು ಮನೋರಮೆ:**

ಚಿರಕಾಲವಾಗಿರಲಿ ಸುಖವಿದು, ಸುಮಂಗಲೆಯೆ !
ನಿನ್ನ ಪ್ರೀತಿಯ ಪುಣ್ಯದಿಂದೆಮ್ಮ ಸಂತಾನ—
ದಭ್ಯುದಯವಾಗಿಹುದು, ಬಯಕೆ ಪೂರೈಸಿಹುದು!

**ಶುಕನಾಸ:**

ನಿಮ್ಮೆಲ್ಲರನು ಕಾಣಲತಿ ತವಕಪಡುತಿರುವ
ದೊರೆಗಳನು ಮನ್ನಿಸುವ. ತ್ವರೆಮಾಡು, ಕಂದ !

**ಪುಂಡರೀಕ:**

ಅಹುದಹುದು, ನನಗಾಗಿ ಚಿಂತಿಸಿದ ದೊರೆಗಳನು
ಕಂಡು ಕಳೆಯಲು ಬೇಕು ಅವರ ಪರಿತಾಪವನು.

(ಎಲ್ಲರೂ ಹೋಗುವರು.)

## ದೃಶ್ಯ ೨

[ಗಂಧರ್ವ ಲೋಕದಲ್ಲಿ ಹೇಮಕೂಟದ ಮೇಲೆ ಶೋಭಿಸುವ ಚಿತ್ರರಥ ರಾಜಧಾನಿಯ ಸುತ್ತಲಿನ ಪ್ರದೇಶ. ಅಲ್ಲಿರುವ ಲೀಲಾಸರದಲ್ಲಿ ನೀರ್ವಿಜ್ಜಣಿಗೆಯ ತೆರದಿಂದ ತೆರೆಗಳು ಬೀಸುವವು; ಹಂಸದ್ವಯಗಳು ನಯನಮನೋಹರವಾಗಿ ಕಾಣುವವು; ನೀರ್ವಕ್ಕಿಗಳು ಉಲಿಯುವವು; ನೀಲ ನೀರೇಜಿನಿಗಳಲ್ಲಿಯ ಬಂಧುರಗಂಧವನ್ನು ಒಳಕೊಂಡು ಸುಯ್ಯೆಲರು ಬೀಸುತ್ತಿರುವದು. ಆ ಕಮಳಾ ಕರದ ಮಗ್ಗುಲಿಗಿರುವ ತಮಾಳವೃಕ್ಷಗಳಾಚೆಗೆ ಬಾಲಕದಳೀವನದ ಮಧ್ಯದಲ್ಲಿ ಒಂದು ಮುತ್ತಿನ ಪಡುಶಿಲೆಯ ಮೇಲೆ ಕಿನ್ನರದಂಪತಿಗಳು ಕುಳಿತಿರುವರು. ಬೆದರಿದಂತೆ ಅರಳೆಗಂಗಳಿಂದ ಕಿನ್ನರಿಯು ಸುತ್ತುವರಿದು ನೋಡುತ್ತಿರುವಳು. ಅದೇ ಚುಮು ಚುಮು ಮುಂದುವರಿಯುತ್ತಿರುವ ನಸುಕು ಕದಳೀವನದಲ್ಲೆಲ್ಲ ಪಸಲೆಗವಿಯುತ್ತಿರುವಂತೆ ತೋರುವದು.]

**ಕಿನ್ನರಿ:**

ಹೇ, ಎನ್ನ ಮನದರಸ, ಮತ್ತೆ ಬಂದಿತು ಬೆಳಗು.
ಬನದಡಿಗೆ ಕೂಡಿದರು, ಹೇಮಕೂಟದ ಮರೆಯ
ಸೇರಿದರು, ಬಂದಿಂತು ಕೆಣಕುವಳು ಅಚ್ಚರಸೆ!
ಶುಭ ವಸಂತದಲೆಮ್ಮ ನಲುಮೆ ನಲಿಯುವದೆನಲು
ತಿಂಗಳಿನ ಕಿರಿ ಬಾಳು ಸೋಲಿಸಿಹುದಾಸೆಗಳ.
ಕಣ್ದೆರೆದು ನಿಲ್ಲುವನಿತರೊಳು ಬರುವದು ನಸುಕು.
ನಮ್ಮ ಲೋಕದೊಳಿಂತು ಸಮನಿಸಿಹುದಿದೆ ಮೊದಲು.
ಇದರ ಕಾರಣವೇನು? ತಿಳಿದು ಬಲ್ಲೆಯ ನೀನು?

**ಕಿನ್ನರ:**

ತಿಳಿಯುದಿದು, ಮನದನ್ನೆ! ನಿನ್ನೊಲಚ್ಚರಿಗೊಳುವೆ
ಅಣಕಿಸುವ ನಗೆ ನಗುತ ಬರುವ ಉಷೆಯನು ನೋಡಿ.

[ಹಾಡುವನು.]

ನಾನು ಅರಸ; ನೀನು ಅರಸಿ. ಎಸೆವ ಕೊಳದ ಬಳಿಯಲಿ,
ಬಂದ ಬನಗಳಡಿಯಲಿ,
ಇನಿಗಳಿಗೆಯ ಕಳೆಯಲೆಂದು ನಿಂತೆವತಿ ವಿಲಾಸದಿ
ಎಸಗುವ ಚಂದ್ರಹಾಸದಿ.

ಕೂಡಿ ನಲಿಯುತಿರಲು ನಲುವೆಯೊಂದು ಅಂದಚೆಂದದಿ,
ಒಂದೆ ಆನಂದದಿ,
ಮಾಮರವದು ರೆಂಬೆಗಳಲಿ ಪಲ್ಲವಗಳ ತೆರೆಯನು,—
ಕರುಣಿಸಿತ್ತು ಮರೆಯನು.
ಹಳೆಯ ಮುಸುಕು ಜಗವನೆಲ್ಲ ಮರೆತು ಕೂಡಿ ನಿಂದೆವು,
ಅದಕೆ ಇಲ್ಲಿ ಬಂದೆವು:
ಒಡನೆ ಬಂತು ಬೆಳ್ಳಿ ಬೆಳಗು ಮಚ್ಚರ ನಗೆ ಸೂಸುತ,
ಅಚ್ಚರೆ! ಕೈ ಬೀಸುತ!
ಯುಗಯುಗಗಳ ಪಥವ ತುಳಿದ ಅಡಿಯಿಡುತಲಿ ಬಂದಿತು,
ನಮ್ಮರವನು ಕಂಡಿತು.
ನಲ್ಲೆ! ತಿಳಿದಿಯೇನು ಅವಳ ಶಲ್ಯದಂಥ ನೋಟವ?
ಕಣ್ಣ ಕುಣಿತದಾಟವ!
ಇತ್ತು ಮೇಲಕಿಟ್ಟ ದೀಪ: ನಾವೆ ಮುಗಿಲೊಳಿರಿಸಿದ
ಚಂದ್ರ ಬೆಳಕು ಸುರಿಸಿದ!
ಕಳೆವ ಹಳೆಯ ಮುಸುಕು ಜಗವ ಕೂಡಿ ತೆರಳ್ವೆವೆಂದೆವು;
ಸೆರೆಗಳಲ್ಲವೆಂದೆವು!
ನಾಣಿಲ್ಲದ ಚಾಣ್ಮೆಯಿಂದ ಮರದ ಬುಡದಿ ಕೂಡುತ
ಒಲಿಯುತಿರಲಿ ಹಾಡುತ,—
ಅಯ್ಯೋ! ಒಡನೆ ಬೆಳಗು ಬಂದು ಸೋದನೆಯನು ಮಾಡಿತು:
ತನ್ನ ಬೆಳಕು ಹರಹಿತು!
ಹಳೆಯ ಮುಸುಕು ಜಗವು ಕಿತ್ತು ಎಣ್ದೆಸೆಯಲಿ ಬೆಳಕು ಬಿತ್ತು,
ಬಂತು ಕುತ್ತು ಸುತ್ತು ಮುತ್ತು!
ನಮ್ಮನುಳಿದು ನಮ್ಮದೇನು, ಏನು ಉಳಿಯಲಿಲ್ಲವು!
ಮಾನವುಳಿಯಲಿಲ್ಲವು!

**ಕಿನ್ನರಿ:**

(ವ್ಯಾಕುಲತೆಯಿಂದ)

ರಾಜಕುವರಿಯದೊರ್ವ ಭೂರಮಣನಲಿ ಒಸೆದು
ಅವನು ಮೆಯ್ಯಗ್ಗಿರೆದಿರಲು ಶೋಕಿಸುವಳೆಂಬುದನು

ನಾ ಕೇಳಿ ತಿಳಿದಿದ್ದೆ. ಇದುವೆ ಕಾರಣವೇನು?
ಅವಳ ಸುಖದುರ್ವಿಗಳನೊಣಗಿಸಿದ ಬೆಳ್ಳಿಳಗು
ಪ್ರಜೆಗಳಲಿ ಹಾವಳಿಯನೆಬ್ಬಿಸಿಹುದೆ?

[ಕದಳೀವನದ ಬಳಿಗೆ ಸುಳಿಯುವ ಹಾದಿಯಲ್ಲಿ ಮಾಲತೀಕುಸುಮಗಳನ್ನು ನಳಿನೀಪತ್ರ-ಪುಟದಲ್ಲಿ ಇರಿಸಿಕೊಂಡು ಕೇಯೂರಕನು ಬರುತ್ತಿರುವನು.]

**ಕೇಯೂರಕ:**

ಗಂಧರ್ವಲೋಕದಲಿ ನಲಿವ ದಂಪತಿಗಳಿರ!
ಹೇಮಕೂಟದಿ ನಿಂತ ಕಿನ್ನರರೆ! ಕೇಳುವದು.
ಇಂದು ಗಂಧರ್ವಚಕ್ರೇಶ್ವರನ ನಗರಿಯುಲಿ
ಹಿರಿಯ ಬಿದ್ದಣವಿಹುದು. ಕಾದಂಬರೀದೇವಿ
ನೃಪರೂಪ ಚಂದ್ರಮನ ವರಿಸುವಳು ಹುಣ್ಣಿಮೆಯ
ಮಂಗಲೋದಯವಾಗೆ. ಮತ್ತಾ ಮಹಾಶ್ವೇತೆ
ದೇವಾಂಶಸಂಭೂತನಿಹ ಪುಂಡರೀಕನಲಿ
ತನ್ನ ಬಾಳ್ವೆಯ ಕುಸುಮಮಂಜರಿಯ ಸಲಿಸುವಳು.
ಮೃತರಾದ ಮದುವಣಿಗರಿಂದುಸಿರ ಪಡೆದಿಹರು.
ಕನ್ನಿಕೆಯರಾರ್ಷ ತಪಕತಿ ಮೆಚ್ಚಿ ಸುರರೆಲ್ಲ
ಕರುಣಿಸಿಹರೀ ಕೂಟವನು. ನೀವು ಮರೆಯದಿರಿ
ಬಾಂದಳದಿ ಸಂಜೆವೆಳಗದು ಚಂದಿರನ ಬರವ
ಸೂಚಿಸಲು ರಾಜರರಮನೆಯೆದುರು ನೆರೆಯುವದ!

[ಹೋಗುವನು.]

**ಕಿನ್ನರ:**

[ಆನಂದದಿಂದ]

ನುಡಿಯನಾಲಿಸು, ನಲ್ಲೆ! ಹೊಳೆದಿಹುದು ಮನಕೀಗ!
ನೀ ಕೇಳ್ದ ಭೂರಮಣನೇ ನಿಶಾಪತಿಯಂತೆ!
ಕಾದಂಬರೀದೇವಿಯವನ ವರಿಸುವಳಂತೆ!
ಎನಿತೊ ಮಾರ್ಪಾಟುಗಳ ತಳೆದ ಚಂದ್ರನಿಗಹುದು
ಈ ಸಲವೆ ಪೌರ್ಣಿಮೆಯು. ನಮ್ಮ ಕಾಣಿಕೆಯಿತ್ತು
ಪಡೆಯುವೆವು ಬಾ, ಚೆನ್ನೆ! ಬೆಳದಿಂಗಳಿನ ವರವ!

(ಹೋಗುವರು)

## ದೃಶ್ಯ ೩

(ಕಾಂಚನಮಯ ತೋರಣಗಳಿಂದ ಅಲಂಕೃತವಾದ ಚಿತ್ರರಥರಾಜನ ಅರಮನೆಯಲ್ಲಿಯ ವಿವಾಹ ಮಂಟಪ. ಮಧ್ಯದಲ್ಲಿ ಪತಿಪತ್ನಿಯರಾದ ಕಾದಂಬರೀ–ಚಂದ್ರಾಪೀಡರೂ ಪುಂಡರೀಕ–ಮಹಾಶ್ವೇತೆಯರೂ ಎದ್ದು ನಿಂತಿದ್ದಾರೆ. ಅವರನ್ನು ಸಾಲು–ಸಾಲಾಗಿ ಸುತ್ತುಗಟ್ಟಿ ಕೋಲು ಹಾಕುತ್ತ ಕಿನ್ನರಿಯರು ನರ್ತಿಸುತ್ತಿದ್ದಾರೆ. ತುಸು ದೂರಕ್ಕೆ ಹೇಮಪದಾಂಕಿತಾಸನಗಳಲ್ಲಿ ಚಿತ್ರರಥರಾಜ ಮದಿರಾದೇವಿ, ಹಂಸರಾಜ ಗೌರೀದೇವಿ, ತಾರಾಪೀಡ ವಿಲಾಸವತೀದೇವಿ, ಶುಕನಾಸ ಮನೋರಮಾದೇವಿ, ಶ್ವೇತಕೇತುಮುನಿ, ಲಕ್ಷ್ಮೀದೇವಿ ಮೊದಲಾದ ಗಂಧರ್ವಲೋಕ ಮಾನವಿ ಲೋಕಗಳ ದಂಪತಿಗಳು ವಿರಾಜಮಾನರಾಗಿದ್ದಾರೆ. ವೀಣಾನಾದ, ಗೀತಸ್ವನ, ವೇಣುರವ, ಮಾಗಧಿಯರ ಜಯಶಬ್ದ ಮುಂತಾದವುಗಳಿಂದ ಮಂಟಪವು ತುಂಬಿ ಹೋಗಿದೆ. ಮಂಟಪದ ಕೆಳಭಾಗದಲ್ಲಿ ಸಾವಿರಾರು ಜನ ತಾರಾಪೀಡನ, ಗಂಧರ್ವರಾಜರ ಹಾಗು ಶ್ವೇತಕೇತು ಮುನಿಯ ಪರಿವಾರದವರು ನೆರೆದಿದ್ದಾರೆ. ವಿಧವಿಧದ ಬೆಳಕಿನಿಂದ ಮಂಟಪವೆಲ್ಲ ಭೂಷಿತನಾಗಿದೆ. ಚಂದ್ರೋದಯವಾಗಿ ಮೆಲ್ಲನೆ ಹಬ್ಬುತಿರುವ ಬೆಳುದಿಂಗಳು ಪೂರ್ವಾಭಿಮುಖವಾಗಿರುವ ದ್ವಾರದಿಂದ ಪ್ರವೇಶಿಸಿ ನವೀನ ದಂಪತಿಗಳ ಕಾಂತಿಯನ್ನು ಹೆಚ್ಚಿಸುತ್ತದೆ.

ತುಸು ಹೊತ್ತಿನ ಮೇಲೆ ಕಿನ್ನರಿಯರ ನಾಟ್ಯಕ್ಕೆ ಪ್ರಾರಂಭವಾಗುವದು.)

### ಕಿನ್ನರಿಯರ ಹಾಡು

ಒಂದನೆಯ ಸಾಲು:—ನಾವು ಕಿಕನ್ನರಿಯರು!
ಎರಡನೆಯ ಸಾಲು:—ಅನುಪಮ ಸುಂದರಿಯರು!
ಒಂದನೆಯ ಸಾಲು:—ಆದರೇನು? ನಮ್ಮ ಚೆಲುವು
ನಮಗಾಗಿಯೆ ಕಾಯ್ವುದು.
ಎರಡನೆಯ ಸಾಲು:—ಒಂದು ಎರಡು ಸಲವೆ ನರನ
ಮಾನಸದಲಿ ವಿಹಾಯ್ವುದು.
ಒಂದನೆಯ ಸಾಲು:—ಕೆಂದಳಿರಿನ ಸೀರೆಯುಟ್ಟು
ಎರಡನೆಯ ಸಾಲು:—ದಾಂಗುಡಿಗಳ ನಿರಿಯ ಬಿಟ್ಟು
ಒಂದನೆಯ ಸಾಲು:—ಪಾರಿಜಾತ ಸ್ಮಿತದ ಮುಖ,—
ಎರಡನೆಯ ಸಾಲು:—ನೋಡಿ ನಕ್ಕ ನಳಿನಸಖ!
ಒಂದನೆಯ ಸಾಲು:—ಮೃದು ಮೃಣಾಳದೆರಡು ತೋಳು,
ಎರಡನೆಯ ಸಾಲು:—ಬೆಳುದಿಂಗಳ ಸಿರಿಯ ಬಾಳು!

ಒಂದನೆಯ ಸಾಲು:—ಜುಳು ಜುಳು—ಮಂಜುಳವು ಗತಿ!
ಎರಡನೆಯ ಸಾಲು:—ಸುಯ್ಯೈಲರಿನ ತುಂಬ ರತಿ!
ಒಂದನೆಯ ಸಾಲು:—ಕೇಶವ್ಯೋಮದಲ್ಲಿ ಚಿಕ್ಕೆ
ಎರಡನೆಯ ಸಾಲು:—ಒಂದು, ಎರಡು, ಮೂರು ಸಿಕ್ಕೆ,
ಒಂದನೆಯ ಸಾಲು:—ಮೀನಕೇತುವಿನ ವಿಜಯ
ಎರಡನೆಯ ಸಾಲು:—ಕಣ್ಣೊಳು ಸೆರೆಯಿರುವ ನಯ!

**ಎಲ್ಲರೂ ಕೂಡಿ:**

ನವಿಲ್ಗರಿ ತಲೆದುಡಿಗೆ ಧರಿಸಿ
ಜಗವನಲೆಯುತಿರುವೆವು!
ಲಾಸ್ಯಕಾಗಿ ಧ್ರುವಲೋಕದ—
ಲೊಮ್ಮೆ ಕಲೆಯುತಿರುವೆವು!

ಒಂದನೆಯ ಸಾಲು:—ನಾವು ಸುರರ ಚೇತಸಗಳು;
ಎರಡನೆಯ ಸಾಲು:—ಋಷಿಯು ಕಂಡ ನವರಸಗಳು!
ಒಂದನೆಯ ಸಾಲು:—ಸಾಲುಗೊಂಡು ಮುಗಿಲಿನಿಂದ
ಎರಡನೆಯ ಸಾಲು:—ಬಹುದು ನಮ್ಮ ಲಲಿತವೃಂದ
ಒಂದನೆಯ ಸಾಲು:—ಗೂಡು ಸೇರಲೆಂದು ಬರುವ
ಎರಡನೆಯ ಸಾಲು:—ಗಿಳಿಗಳೊಡನೆ ಸೇರಿ ತರುವ,
ಒಂದನೆಯ ಸಾಲು:—ದಿನದ ಕಥೆಯನೆಲ್ಲ ಮರೆದು
ಎರಡನೆಯ ಸಾಲು:—ಒರಗಿದವನ ಮನದಿ ನೆರೆದು
ಒಂದನೆಯ ಸಾಲು:—ಭೃಂಗಾಲಕವಾಗಿ ಎಸಗಿ
ಎರಡನೆಯ ಸಾಲು:—ಭಸ್ಮಲಸಿತವಾಗಿ ಮಸಗಿ,
ಒಂದನೆಯ ಸಾಲು:—ಸುರಲೋಕದ ದಿವ್ಯ ಪ್ರಭೆ,—
ಎರಡನೆಯ ಸಾಲು:—ನೆರೆ ತೋರಿಸುತದರ ಶೋಭೆ!

**ಎಲ್ಲರೂ ಕೂಡಿ:**

ಮೈತ್ರಿಮನದ ಚೈತ್ರವನದಿ
ಮಿನುಗಿ ಚಲಿಸುತಿರುವೆವು!

ನಕ್ಕು ನಲಿದು ಬಗೆಯಣುಗರ
ಸೊಗದಿ ನೆಲೆಸುತಿರುವೆವು !

**ಎಲ್ಲರೂ ಕೂಡಿ:**

ದೇವಕನ್ಯೆಯರಿಗೆ ನಮ್ಮ
ಲಾಸ್ಯ ಮನಕೆ ಬರದು. ತಮ್ಮ
ಮೌನದಿಂದ ಮನವ ಸೆಳೆದು
ನರನ ನಾಕಲೋಕಕೆಳೆದು
ರಮಿಸುತಿಹರು. ನಮ್ಮ ಲೀಲೆ
ನಡೆದು ಭೂಮಿಪಟದ ಮೇಲೆ,
ನರನ ಬಾಳಿನಲ್ಲಿ ಬಳುಕಿ
ಅವನ ಜೀವದಲ್ಲಿ ತುಳುಕಿ,
ಸಿಕ್ಕೆವೆಂದು ತೋರಿಸಿ
ಮತ್ತೆ ಇಲ್ಲದಾಗಿಸಿ
ನಿತ್ಯ ಮಾಯವಾಗುತಿಹೆವು.
ಮತ್ತೆ ಬಂದು ಕಾಣುತಿಹೆವು !
ಸ್ವರ್ಗದಾಸೆಯನ್ನು ಹಚ್ಚಿ
ಮರ್ತ್ಯರೊಡನೆ ನಲಿವೆವು.
ಅಮೃತದೀಕ್ಷೆಯನ್ನು ಕೊಡದೆ
ಅವರನೊಲಿಸಿ ಒಲಿವೆವು !

(ನಾಟ್ಯವು ನಿಲ್ಲುವದು. ಕಾದಂಬರೀ—ಮಹಾಶ್ವೇತೆಯರು ಆ ಮೇಲೆ ಒಂದು ಹಾಡು ಹಾಡುವರು.)

## ಕಾದಂಬರಿ ಮಹಾಶ್ವೇತೆಯರ ಹಾಡು:

**ಮಹಾಶ್ವೇತೆ:**

ಭೂಮಿದೇವಿಗೆ ಮುಕುಟವಿಡುವಂಥ ಮಾಣಿಕಗಳು,—
ಕಾರಣಿಕಪುರುಷರಿಂತೊಗೆತರಲು, ಇಂದ್ರಪುರಿಯು

**ಕಾದಂಬರಿ:**

ದ್ವಾರಗಳ ತೆರೆಯುವದು, ಹೂಗಳನು ಮಳೆಗರೆವುದು !
ಅವರ ಸ್ಪರ್ಶವೆ ಭಾಗ್ಯ, ಅವರ ದರ್ಶನವೆ ಸಿರಿಯು.

**ಮಹಾಶ್ವೇತೆ:**

ಅವರ ದೇಹವು ತಳೆದ ಚಂದ್ರಿಕೆಯು ಒಳ್ಪುಗಳನು
ಸಕಲಪರಿಪೂರ್ಣರಿಹ ದೇವತೆಗಳಾಸಿಸುವರು.

**ಕಾದಂಬರಿ:**

ಅವರ ಮನ–ಬುದ್ಧಿಗಿಹ ಮಲ್ಲಿಗೆಯ ಮೆಲ್ಪುಗಳನು
ಅಷ್ಟದಿಕ್ಪಾಲಕರು ಮನದಣಿಯೆ ಮೂಸಿಸುವರು.

**ಮಹಾಶ್ವೇತೆ:**

ಕಿನ್ನರಿಯರೀ ಪುರುಷರೊಳಿಗದ ಬಾಳಿನವರು,
ಗಂಧರ್ವರವರ ಪದಪದ್ಮದಲಿ ಜೀವಿಸುವರು.

**ಕಾದಂಬರಿ:**

ತಾರೆಗಳ ಮೇಳದವರೆ ನಲಿವರ ವಚನಗಳಲಿ
ಮುಕ್ತಿಯೆಂದಾಪ್ಸರಿಯರನುದಿನವು ಭಾವಿಸುವರು !

[ಆಮೇಲೆ ಚಂದ್ರಾಪೀಡ–ಪುಂಡರೀಕರು ಹಾಡುವರು.]

## ಚಂದ್ರಾಪೀಡ–ಪುಂಡರೀಕರ ಹಾಡು

**ಪುಂಡರೀಕ:**

ಮೂರು ಲೋಕಗಳಲಿ ಒಂದೆ
ನೂರು ಜನ್ಮಗಳಲಿ ಒಂದೆ
ಒಂದೆ, ಒಂದೆ । ಎಂದಿನಂತೆ ನಲುಮೆ ಒಂದಿದೆ !

**ಚಂದ್ರಾಪೀಡ:**

ದೇಹಪ್ರಾಣಗಳಲಿ ಒಂದೆ
ಸೃಷ್ಟಿ ದೃಷ್ಟಿಗಳಲಿ ಒಂದೆ
ಸತ್ಯದಂತರಾಳವನ್ನೆ ಪ್ರೀತಿ ಹೊಂದಿದೆ !

**ಪುಂಡರೀಕ**

ಮುಗಿಲಿನಿಂದ ಭೂಮಿಗಿಳಿದು
ಭೂಮಿಯಿಂದ ನಭಕೆ ಬೆಳೆದು
ವಿಶ್ವಪುರುಷನಾಗಿ ನಲುಮೆ ನಗುತ ನಿಂತಿದೆ.

**ಚಂದ್ರಾಪೀಡ:**

ನಲುಮೆಯೊಡನೆ ಸಾಮರಸ್ಯ–
ವಿಹುದೆ ಜಗದ ಘನ ರಹಸ್ಯ
ಬಾಳ್ಮೆಯೆಂಬ ಕಥೆಯ ಮೂಲ ಸಾರವಿಂತಿದೆ ।

[ತೆರೆಯು ಬೀಳುವದು]

ಅಕ್ಟೋಬರ್ ೧೯೩೩.

# ತೀರದ ದಾರಿ

## (ಮೊದಲು ಮಾತು)

ಈ ದೃಶ್ಯಾತ್ಮಕ ಕವನದ ಉಗಮವು ಹೀಗೆ: ಒಂದು ದಿನ ನಾನು ಧ್ಯೇಯದ ವಿಶಾಲತೆಗೂ ಜೀವನದ ಸಂಕೋಚಕ್ಕೂ ಇರುವ ಅಂತರವನ್ನು ಮನಸ್ಸಿನಲ್ಲಿ ಅಳೆಯುತ್ತ ಕುಳಿತಿದ್ದೆ. ಒಮ್ಮೊಮ್ಮೆ ಬಾಳುವೆಯ ಸ್ವರೂಪವು ಧ್ಯೇಯವನ್ನು ಬಹುಪುಟ್ಟಿಗೆ ಹೋಲುವಂತೆ ತೋರಿದರೂ ಅದರಲ್ಲಿ ಧ್ಯೇಯದ ಒಳತಿರುಳೇ ಇರುವದಿಲ್ಲ. ಈ ಕಲ್ಪನೆಯಿಂದ 'ತೀರದ ದಾರಿ'ಗೆ ಪುಟ ಸಿಕ್ಕಿತು. ಸುಕುಮಾರನಿಗೆ ಒಂದು ಕನಸು ಕಾಣಿಸಿಕೊಳ್ಳುತ್ತಿರುತ್ತದೆ. ಈ ಕನಸೇ ಅವನ ಧ್ಯೇಯದ ಪ್ರತೀಕ. ಧ್ಯೇಯವಾದಿಯಾದ ಅವನು ಆ ಕನಸನ್ನು ಪಡೆಯಲು ಹವಣಿಸುತ್ತಾನೆ. ಅವನಿಗೆ ದೊರೆಯುವದು ಅದರ ಬಹಿರಂಗ ಸಾಮ್ಯವು ಮಾತ್ರ. ಅವನಿಗೆ ಬೇಕಾದುದು ರತ್ನಪಕ್ಷಿಯಂತೆ ರೂಪಗೊಂಡ ಆ ನೀಲವರ್ಣದ ಪಕ್ಷಿ. ಅವನಿಗೆ ದೊರೆಯುವದೊಂದೇ—ಆ ರತ್ನಪಕ್ಷಿಯ ದೇಹಪಂಜರ! ಪಕ್ಷಿಯ ಕರೆಯನ್ನು ಕೇಳಿದಾಗ ಧ್ಯೇಯದ ದಾರಿಯು 'ತೀರದ ದಾರಿ'ಯೆಂಬುದು ಸುಕುಮಾರನಿಗೆ ಗೋಚರವಾಗುವದು.

ಮೂಲ ಕಲ್ಪನೆಯು ದೃಶ್ಯರೂಪವಾಗಿ ವ್ಯಕ್ತವಾಗಿದ್ದ ಕಾರಣ ಇನ್ನೊಂದು ಪಾತ್ರವನ್ನು ರಚಿಸುವದು ಅವಶ್ಯವಾಯಿತು. ಕುಮಾರನು ಸುಕುಮಾರನ ಗೆಳೆಯ. ಶುದ್ಧ ಸ್ನೇಹಭಾವದಿಂದ–ಸುಕುಮಾರನೊಡನೆ ಸಹಕರಿಸಲೆಂದು ಮಾತ್ರ–ಅವನೂ ಕನಸನ್ನು ಪಡೆಯಲು ಸಾಹಸಬಡುತ್ತಾನೆ. ಧ್ಯೇಯದ ಬಹಿರಂಗಸಾಮ್ಯದಿಂದ ಸಹ ಅವನಿಗೆ ಸಂತೋಷವೆನಿಸುವದು. ಆದನ್ನು ಬಿಟ್ಟು 'ತೀರದ ದಾರಿ'ಯನ್ನು ನಡೆಯಲು ಅವನಿಗೆ

ತುಂಬಾ ಅಸಮಾಧಾನ. ಆದರೆ ಸುಕುಮಾರನ ಜೊತೆಯಲ್ಲಿದ್ದ ಅವನಿಗೂ ಆ ಧ್ಯೇಯವು-ಪಕ್ಷಿಯು-ಕಾಣಿಸಿಕೊಂಡಾಗ – ಅವನ ಅಸಮಾಧಾನವು ತೊಲಗಿ ಹೋಗುವದು.

ರತ್ನಪಕ್ಷಿಯ ಬಳಿಗೆ ಸಂಜೀವಿನೀ ಕಡ್ಡಿಯಿರುವದೆಂದು ಒಂದು ವದಂತಿಯಿದೆ. ಈ ದಂತಕಥೆಯನ್ನೇ ಅವಲಂಬಿಸಿ ಒಂದು ಕಾವ್ಯವನ್ನು ಬರೆಯಬಹುದಾಗಿ ಗೆಳೆಯರು ಮಾತನಾಡುವದನ್ನು ನಾನು ಕೇಳಿದ್ದೆನು. ಅದನ್ನಿಲ್ಲಿ ಬಳಸಿಕೊಳ್ಳಲು ನನಗೆ ಅವಕಾಶವಿರಲಿಲ್ಲ;-ಧ್ಯೇಯ ಮತ್ತು ಜೀವನಗಳ ನಡುವಿನ ಮಹದಂತರವೇ ಇಲ್ಲಿಯ ಮುಖ್ಯ ವಸ್ತುವಾಗಿದ್ದರಿಂದ. ಆದರೆ ಆ ಕಥೆಯಲ್ಲಿ 'ರತ್ನಪಕ್ಷಿ'ಗೆ ಇರಬಹುದಾದ ದಿವ್ಯತೆ-ಮನೋಹರತೆಗಳನ್ನು ನಾನಿಲ್ಲಿ ಉಪಯೋಗಿಸಿಕೊಳ್ಳಲು ಪ್ರಯತ್ನಿಸಿದ್ದೇನೆ. 'ರತ್ನಪಕ್ಷಿ'ಯು ಕಲ್ಪನಾರಾಜ್ಯದಲ್ಲಿ ಹಾರಾಡುವ ಪಕ್ಷಿ. 'ಸಂಬಾರಕಾಗೆ'ಯು ಪ್ರಪಂಚದಲ್ಲಿ ಅದರ ಸಾಮ್ಯವೋ ಏನೊ!–

ಈ ದೃಶ್ಯವನ್ನು ಬರೆದ ಮೇಲೆ ನಾನು ಮೇಟರಲಿಂಕ್ ಅವರ The Blue Bird (ನೀಲಪಕ್ಷಿ) ಎಂಬ ದೃಶ್ಯಕಾವ್ಯವನ್ನು ಓದಿ ನೋಡಿದೆ. ಅಲ್ಲಿಯ ವರೆಗೆ ಅದರ ಹೆಸರನ್ನು ಕೇಳಿ ಗೊತ್ತಿತ್ತು. ಇರಬಹುದಾದ ಹೋಲಿಕೆ – ವ್ಯತ್ಯಯಗಳನ್ನು ತಿಳಿದುಕೊಳ್ಳಲೆಂದೇ ಓದಿದೆನು. ಅಲ್ಲಿಯ ಕಥೆಯ ಪಡಿಯಚ್ಚೇ ಬೇರೆಯಾಗಿದೆ. 'ತೀರದ ದಾರಿ'ಯು ಓರ್ವ ತರುಣ ಕವಿಯು ಬರೆದ ಒಂದು ಚಿಕ್ಕ ರೂಪಕವಾಗಿದೆ; The Blue Bird ಎಂಬುದು ಆಧುನಿಕ ಋಷಿವರ್ಯರಲ್ಲೊಬ್ಬರು ಬರೆದ-ಅವರ ತತ್ವಸಾರದಂತಿದ್ದ-ಒಂದು ಭವ್ಯದಿವ್ಯವಾದ ನಾಟಕ!

'ಉಳಿದ ಭಾಗವು ಅಷ್ಟಕ್ಕಷ್ಟೆ; ರತ್ನಪಕ್ಷಿಯ ಹಾಡು ಮಾತ್ರ ಕಾವ್ಯಮಯವಾಗಿದೆ'ಯೆಂದು ಒಬ್ಬ ಗೆಳೆಯನು ಹೇಳಿದ್ದನು. ಇದು ವಿಚಾರಣೀಯವಾದ ಮಾತು.

ಪುಣೆ
೧೦-೧೧-೩೪

ವಿನಾಯಕ

# ತೀರದ ದಾರಿ

## (ಒಂದು ದೃಶ್ಯಾತ್ಮಕ ಕವನ)

[ಒಂದು ನಿಬಿಡಾರಣ್ಯದ ಬದಿಯಲ್ಲಿಯ ದಾರಿ. ಅಲ್ಲಿ ಕುಮಾರ, ಸುಕುಮಾರರೆಂಬ ಇರ್ವರು ಬಾಲಕರು ಮಾತನಾಡುತ್ತ ಸಾಗಿದ್ದಾರೆ. ದೂರ ಕ್ಷಿತಿಜದಲ್ಲಿ ಒಂದು ಅರಮನೆಯ ಹೊಂಗಳಸಗಳು ಹೊಳೆದು ಕಾಣಿಸುತ್ತಿವೆ.]

**ಸುಕುಮಾರ:**

ಅಲ್ಲಿ ನೋಡದೊ ಗೆಳೆಯ !
ನನ್ನ ಕನಸಿನ ಗುರಿಯು ಮಸಗಿ ಕಾಣುತಲಿಹುದು.
ನೂರಸಲ ಮುಗಿಲಿನಲಿ ರೆಕ್ಕೆಗಳ ಮೇಲೀಸಿ
ಕಂಡ ತುಂಗೋತ್ತುಂಗ ಪರ್ವತದ ಸೀಮೆಯಲಿ
ಒಂದು ಬನವಿದ್ದುದನು ನಿನಗೆ ಹೇಳುತಲಿದ್ದೆ.
ನನ್ನ ಮುಂದಿನ ಕಾಣ್ಕೆ ಬನದ ಮೇರೆಯ ಮೀರಿ
ಅದರೆದೆಯ ನಾಡಿನೊಳಗೊಂದು ಪ್ರಾಸಾದವನು
ಕಂಡು ನಿಂದಂತಿತ್ತು. ಅದರೊಳಕೆ ಬಲಗೊಂಡೆ
ನನ್ನ ಮನವನು ಸೋಲಿಸಿದ ರತ್ನಪಕ್ಷಿಯನು !
ಅದರ ಬಹುವಿಧದ ಮೋಹದ ಕರೆಯನಾಲಿಸುತ
ಮನದಿ ಜನಿಸಿತು ಅದನು ಪಡೆಯಬೇಕೆಂಬಾಸೆ.
ಕನಸಿನಲಿ ತಣಿಸಿರುವ ಕರೆಯು:—ದಿಗ್ವಲಯದಲಿ
ಒಂದು ಶುಭನಿಲಯದಿಂದೈತಂದುದೆಂದೆನಿಸಿ
ಅರಸಲನುರಾಗವಿರೆ,-ಒಡನಾಡಿ ನೀ ಬಂದೆ !
ಎದುರು ನೋಟವ ನೋಡು ! ಅರಮನೆಯ ಹೊಂಗಳಸ

ಹೊಂಗೇದಿಗೆಯು ತೆರದಿ ಹಸನಾಗಿ ಹೊಳೆಯುತಿದೆ !
ಕಲ್ಲುಮುಳ್ಳಿನದಾರಿ ಇಲ್ಲದಾಯಿತು ಇಂದು !
ಲಭಿಸಿದವು ನಾವ್ ಬಯಸಿ ಸೊಂದಿರುವ ತೇಜಗಳು !

**ಕುಮಾರ:**

ಅಚ್ಚರಿಯು ! ನಿನ್ನ ಬಣ್ಣನೆಯು ಕನಸನು ಮೀರಿ
ಮೆರೆಯುತಿದೆ ಸತ್ಯವಿದು. ಇದುವೆ ಯಾತನೆಯು ಕೊನೆ.
ನಿನ್ನ ಮೇಲಿನ ಮೋಹವೆನ್ನನೆಸೆದಿತು ಇಲ್ಲಿ.
ಇರಲಿಲ್ಲವೆನಗೆ ಈ ರತ್ನಪಕ್ಷಿಯ ಬಯಕೆ;
ಆದರಾ ನಿನ್ನ ಬಗೆಗೊಳುವ ಸ್ವಪ್ನಗಳನ್ನು
ಕೇಳಿ ಹಾತೊರೆದಿದ್ದೆ ಆ ಪಕ್ಷಿ ಬೇಕೆಂದು.
ನೀನೆ ಸಾಹಸಭೀಮ, ಕುಂದದಿಹ ಎದೆಗಾರ.
ನಿನ್ನ ಬೆಂಗಾವಲಿಗ,–ನಾನೇನ ಗೆಯ್ಯುವೆನು !
ನಿನ್ನ ಕೆಯ್ಮೆಯ ಮೆಯ್ಮೆಯನ್ನು ಪಾಲಾಗಿಸಲು
ಜೀವಿಸಿರುವೆನು ಮಾತ್ರ ! ಆದರೂ ಈ ದಾರಿ,–
ಕೇಡುಗಾಲದ ಕೂಸಿಗಾದರೂ ಬೇಡವಿದು !–
ಹಿಂತುಳಿದು ಮುಂತುಳಿದು ಬೇಸರಾಯಿತು ಜೀವ.

**ಸುಕುಮಾರ:**

ಇಂತು ನುಡಿವುದೆ ಗೆಳೆಯ ! ಅರಮನೆಯ ನೋಟವನು
ಕಾಣಲೆಳಸಿದ ಕಂಗಳೆಂದೊ ಕುರುಡಾಗಿಹವು
ನೋವ ಸಣಸಾಟಕ್ಕೆ. ಉಳಿದುದೆಲ್ಲವು ಬಯಲು.
ಅದರ ಚೆಲುವಿಕೆಯೊಂದು ನನ್ನ ಕಣ್ತುಂಬಿಹುದು.
ಅಂದು ಕಂಡಿಹ ಕನಸನಿಂದಿಲ್ಲಿ ಕಾಣ್ಬನಕ
ಎಚ್ಚರಿಲ್ಲದೆ ಬಂದೆ–ದೂರೊಂದು ಜ್ಯೋತಿಯನು
ಕಂಡಿರುವ ಹುಳದಂತೆ. ನಡೆದುದರ ನೆನಪಿಲ್ಲ.
ಇಂದು ಕಾಣುವೆ ನೆಚ್ಚು ಮೆಚ್ಚಿನ ವಿಹಂಗಮವ !

**ಕುಮಾರ:**

ನನ್ನಿಗನೆ ! ಪಕ್ಷಿಯನು ಹಿಡಿದುಕೊಂಡಾ ಮೇಲೆ
ನೆನಪಿಹುದು ನೀನೊರೆದ ಮಾತು. ಸಂಪದವೆಲ್ಲ

ಪದತಲದಿ ಪವಡಿಸುವದೆಂದೆ. ಕಲ್ಪದ್ರುಮದ
ನಮ್ರಾಣತಿಯು ತಾಣದಲ್ಲಿ ಎಸೆಯುವದೆಂದೆ.
ಕಾಮಧೇನುವು ಕ್ಷೀರವನ್ನು ಸುರಿಸುವದೆಂದೆ.
ಇದು ನಿಜವೆ ? ಅರಸುಗಳಿಗರಸು ನಾವಾಗುತ್ತ
ಸೂರೆಗೊಂಡಿಳೆಯೊಳಿಹ ಸಕಲ ಸುಖಸಾಧನೆಯ;—
ಇಂದ್ರನಮರಾವತಿಯನೇಳಿಸುವ ನಗರದಲಿ
ಮೆರೆಯಬಹುದೆಲೆ ಗೆಳೆಯ ?

**ಸುಕುಮಾರ:**

ಕುರಿವಾನಿಸರೆ ನಾವು ?
ಇವುಗಳೋಜೆಯು ನಾಚುವಂಥ ಬಾಳೊಂದಿಹುದು;
ರತ್ನಪಕ್ಷಿಯ ನೋಡಿ ಕಣ್ಣೆದುರು ಕಟ್ಟಿಹುದು
ಆ ಬಾಳ ಪಡಿನೆಳಲು ಅದರ ದರ್ಶನ ಹೊಂದಿ,
ಕಾಲಾಂತರದ ಸ್ಮೃತಿಯು ತಾ ಚಿಗಿತು ಸುಮವಾಗೆ,
ನಿನ್ನೆದೆಯ ಪೊದೆಯಲ್ಲಿ ಕರಕರೆಯ ಪಮುತಿರುವ
ಕಾಡು ಬಾನಾಡಿಗದರಮಿತ ಬಂಧುವ ತೋರಿ
ಪುಣ್ಯವನು ಗಳಿಸಯ್ಯ. ಉದಯವಾಗಲಿ ಹಾಡು
ಅದರಕ್ಷ್ನುಧೆ ಶಾಂತವಾಗುತ ಬಂದು. ಇಂತಿರಲು
ಲೋಕದೊಡೆತನದಲ್ಲಿ ಇನ್ನಾವ ಬಿನ್ನಾಣ ?
ರತ್ನಪಕ್ಷಿಯು ನುಡಿದ ಮಾತು ಸೋಜಿಗವಹುದು.
"ಪರಿಸಗಲ್ಲಿಗೆ ತಗಲಿ ಕಾರ್ಬೊನ್ನು ಪೊನ್ನಾಯ್ತು,
ನಿನ್ನ ಜೀವದ ಹಸುಳೆಹಕ್ಕಿ ನನ್ನನು ಸೋಂಕಿ
ರತ್ನಮಯವಾಗುವದು. ಆಗ ನೋಡುವೆಯಂತೆ !
ಬಹುರತ್ನಭೂಷಿತೆ ವಸುಂಧರೆಯು ಎಲ್ಲೆಡೆಗೆ
ರತ್ನಪಕ್ಷಿಗಳನ್ನು ತೋರುವಳು. ಕೋಕಿಲವು
ನಿನ್ನ ಜೊತೆಯಾಗುವದು. ನವಿಲು ನೆರಳಾಗುವದು.
ಅರಸಿಯರ ಹೃದಯಸರಸಿಯಲಿ ವೇದನೆಪಡುವ
ರಾಜಹಂಸವು ಈಜಿ ನಿನ್ನೆಡೆಗೆ ಮರಳುವದು.

ಭೂಮಿಯಲಿ ಎರಡು ವಿಧ,–ರತ್ನ ಇಲ್ಲವೆ ಮಳಲು.
ನೀ ರತ್ನಮಯವಾಗಿ ದಾರಿಮಳಲನು ಕೂಡ
ರತ್ನವಾಗಿಸು ಕಂದ !" ಎಂದು ಕರೆದಿತು ಪಕ್ಷಿ

**ಕುಮಾರ:**

ದಾರಿಹೋಕರು ತಿಳಿಯರೀ ನುಡಿಯ ಭಾವವನು.
ಆ ಪಕ್ಷಿಯೊಂದೆಮಗೆ ದೊರೆತು ಸಂಪ್ರೀತಿಯನು
ಇತ್ತುದಾದರೆ ಮುಂದೆ ನಮಗೆ ಬೇಕಿಹುದೇನು ?
ಪಕ್ಷಿಗೆಂದೆಮ್ಮ ವೃಕ್ಷವು ಬೆಳೆಯಲನುವಾಯ್ತು.
ಪಕ್ಷಿಯೊಂದೆಯೆ ಸಾಕು; ಪಕ್ಷಿಸಂಕುಲವೇಕೆ ?

**ಸುಕುಮಾರ:**

ವಿಹಗದಾ ಕರೆಯಲೆಯ ಮೇಲಿಂತು ನಡೆಯುತ್ತ
ಬಂದಿಹೆನು; ನನ್ನ ಬಾಳಿನ ಮುಡುಪ ಸಲ್ಲಿಸುತ
ಪ್ರತಿಯಾಗಿ ರತ್ನಭಾಂಡಾರವನು ಕೈಗೊಂಡು
ನನ್ನೆದೆಯ ಪೀಠದಲಿ ಪಕ್ಷಿಯನು ಕುಳ್ಳಿರಿಸಿ
ಅದರ ನುಡಿಯಂತೆನ್ನ ಜೀವನವ ಮಾರ್ಪಡಿಸಿ
ಸೂರೆಗೊಳಿಸುವೆನಿಳೆಯೊಳಾ ರತ್ನರಾಶಿಯನು !

(ಮುಂದೆ ಸಾಗುತ್ತ ಬಂದ ಅವರು ಅರಮನೆಯನ್ನು ಸಮೀಪಿಸುವರು.)

**ಕುಮಾರ:**

ಇರಲಿ ನಡೆ. ಮೊದಲು ಪಕ್ಷಿಯನು ಕಾಣುವೆವಂತೆ.
ಕಾನನದಿ ಚಿಂತಿಸುತ ಕುಳಿತ ತವಸಿಯ ತೆರದಿ
ತಲ್ಲೀನವಾಗಿಹುದು ಕಾಂತಾರದರಮನೆಯು.
ಸ್ಫೂರ್ತಿಗೆಂದಾ ಋಷಿಯು ತನ್ನಂತರಂಗವನು
ತೆರೆದಂತೆ ಅದರ ದ್ವಾರಗಳೆರಡು ತೆರೆದಿಹವು.

**ಸುಕುಮಾರ:**

(ಉತ್ಸಾಹದಿಂದ)

ಕನಸಿಗೆಂದಾರತಿಯ ಬೆಳಗಿ ನಿಂತಿಹ ನಾನು
ಸತ್ಯವನು ಪೂಜಿಸಿದೆ ! ಮನದಂತರಿಕ್ಷದಲಿ

ಮೆರೆದ ನೋಟವು ತುಂಬಿತೀ ಚರ್ಮಚಕ್ಷುಗಳ.
ನೂರುಸಲ ಗಾನಸಿರಿಯಿಂದೆನ್ನ ರಮಿಸಿರುವ
ರತ್ನಪಕ್ಷಿಯ ನೆಲೆಯು ಕೊನೆಗೆ ಅವಗತವಾಯ್ತು.
ಇನ್ನು ವಿಶ್ವದ, ನನ್ನ, ಬಾಳುವೆಗಳೊಂದಿಹವು.

**ಕುಮಾರ:**

(ಆನಂದಾತಿರೇಕದಿಂದ)

ಗೆಳೆಯ ! ನೋಡೀ ಪವಡಿಸಿರುವ ಸೌಂದರ್ಯವನು !

**ಸುಕುಮಾರ:**

[ಮಹಾದ್ವಾರವನ್ನು ಸಮೀಪಿಸಿ]

ಇವನಿವನೆ ಅರಮನೆಯ ದ್ವಾರಪಾಲಕನಿವನು !
ಓ ! ಎನ್ನ ಕನಸಿನೊಳಗೊಲಿದು ನುಡಿದಿಹ ಬಂಧು
ಇವನಿವನೆ ! ಪಕ್ಕಗಳನೊಯ್ಯನೆತ್ತಿಹ ರೀತಿ
ಇವನದಿದು ! ಕೈಯಲಿಹ ದಂಡ ! ಕಾಲುಗಳನ್ನು
ತೊಡಕಿ ನಿಂತಿರುವೆಸಕ ! ಅನಿಮಿಷರ ಕಳೆಯಿಹುದು.
ಬೆಸನವೇನೆಂದೆನ್ನ ನಗುತ ಕೈವಿಡಿದೊಯ್ದು
ದ್ವಿಜರತ್ನದೆದುರೆನ್ನ ನೂರುಸಲ ನಿಲ್ಲಿಸಿದ
ಅನಿಮಿತ್ತ ಬಾಂಧವನೆ ! ನಾನಾಗಿ ಬಂದಿಹೆನು.
ದೇಹವನು ತಳೆದು ಸಮಭಾಗಿಯಾಗುತ ನಿನ್ನ
ಕಂಡಿರುವದಿದೆ ಮೊದಲು ! ನಿನ್ನ ಕೃಪೆಯಿರಲೆನಗೆ.

[ಮಹಾದ್ವಾರದಲ್ಲಿ ದ್ವಾರಪಾಲಕನಂತಿರುವ ಶಿಲಾಮೂರ್ತಿಗೆ ಅಭಿನಂದಿಸುವನು. ಯಥೋಚಿತವಾಗಿ ಮೂರ್ತಿಯು ಸುಮ್ಮನಿರುವದು.]

**ಕುಮಾರ:**

[ಶಿಲಾಮೂರ್ತಿಗೆ]

ನಾನಿವನ ಸಂಗಡಿಗ. ಇವನೊಡನೆ ಸಂಚರಿಸಿ
ಕಾಣಬಯಸುವೆನಿಂದು ಆ ರತ್ನಪಕ್ಷಿಯನು.

**ಸುಕುಮಾರ:**

[ಶಿಲಾಮೂರ್ತಿಗೆ]

ನಿನ್ನ ವಾಕ್ಸುಧೆಯಿಂದು ನನ್ನೆದೆಯ ತೋಯಿಸಲಿ.
ಇಂದೆನಗೆ ನಿಜವಾದ ಜೀವನವು. ನುಡಿಯಯ್ಯ!
ಇನ್ನು ಪ್ರೀತಿಯ ರತ್ನಪಕ್ಷಿಯೆಡೆ ತೆರುಳುವೆನು.

**ಕುಮಾರ:**

[ಶಿಲಾಮೂರ್ತಿಗೆ]

ಅಹುದಹುದು. ಪಕ್ಷಿಯನು ಕಾಣುವೆವು. ತ್ವರೆಮಾಡು.

**ಸುಕುಮಾರ:**

(ಶಿಲಾಮೂರ್ತಿಯನ್ನು ದಿಟ್ಟಿಸಿ ಪರೀಕ್ಷಿಸಿ ನೋಡುತ್ತ ದುಃಖದಿಂದ).

ಅರರೆ! ಎಳನಗೆಯು ತಾ ಮಿನುಗುತಿರುವಲ್ಲಿಲ್ಲ
ಜೀವದಾಭಾವವದು. ಉಸಿರಿಗಾಸರೆಯೆಲ್ಲಿ
ಈ ಮೂರ್ತಿಯಂತರಾಳದಲಿನ್ನು? ಅಕಟಕಟ
ಮೂರ್ತಿಯಿದು! ಬರಿ ಮೂರ್ತಿ! ಪ್ರಾಣದೇವನು ತೊರೆದ
ದೇಹದೊಳಗುಡಿಯುಹುದು. ಅಯ್ಯೋ! ವಂಚಿತನಾದೆ
ಬಾಳ್ಕೆಯೆಂದದರ ಪಡಿನೆಳಲನ್ನು ತಳ್ಕಿಸುತ!
ಆದರಚ್ಚಳಿಯದಿದೆ. ಆ ರೂಪು, ಆ ರೇಷೆ—
ಯೊಡಮೂಡಿದಂತಿಹುದು. ಆದರಿದರೊಳಗಿಲ್ಲ
ಅನಿಮಿಷನ ಕೋಮಲತೆ, ಚಿರಜೀವಿಗಿಹ ಬೆಳಕು.
ಪ್ರತಿಬಿಂಬವನು ಮಾತ್ರ ನನ್ನೆದುರು ನೋಡುವೆನು.
ಇಲ್ಲಿಹುದು ಜೀವನದ ಮಾಯೆ. ಕವಿಪುಂಗವರು
ಬಾಳ ದಿವ್ಯತೆಗಳನು ನೆನೆದು ಬಣ್ಣಿಸಲೆಸಗಿ
ನುಡಿಯ ಜಾಲವನೊಂದು ಹೆಣೆಯುವರು. ಶಿಲ್ಪಿಗಳು
ಸಂಜೆಮುಂಜಾವುಗಳನೆಲ್ಲ ಮೂಡಿಸಲೆಳಿಸಿ
ಬಣ್ಣದನುಕ್ರಮವನ್ನು ಬರೆಯುವರು. ದೈವಿಕತೆ—
ನಿರ್ಮಾಣಕಾರ್ಯದಲಿ ದೇವನಿತ್ತಿಹ ಬೆಳಕು—
ಅದು ಮಾಯವಾಗುವದು. ಅಕಟಕಟ! ಇದರಂತೆ

ನನ್ನ ಜೀವವನುಂಡ ಕನಸುಗಳು ಜೀವನದಿ
ಮೂಡಿ ಬರಬೇಕೆಂದು ನಾನೆಳಸುತಿರುವಾಗ
ಮಣ್ಣಿನಲಿ ತಲೆಯೆತ್ತಿ ಮಲಿನತೆಯ ಹೊಂದಿಹವು.
ಅಲ್ಲ, ನನ್ನಯ ಪಯಣ ಮುಗಿವ ಕಾಲವಿದಲ್ಲ.
ಕನಸುಗಳು ನನ್ನ ಕೊಂಡೊಯ್ವನಕ ಬಳಲಿಕೆಯು !
ಇಲ್ಲದಿರೆ ಅವನೆಲ್ಲ ಪಡೆವನಕ ಇರುವಿಕೆಯು !

**ಕುಮಾರ:**

ಆಲಾಪವೇನಯ್ಯ ? ಮಾತನಾಡಿದ ಬೊಂಬೆ
ಮಾತನಾಡಿಸದಿರಲು ಕೊರತೆಯೇನಿಹುದಿಲ್ಲಿ ?
ಸಾಗಿ ಬಾ ಬಯಲು ಚಿಂತೆಯ ತೊರೆದು. ಪಕ್ಷಿಯದು
ಹಾರಿ ಹೋಗಲು ಬಹುದು. ಆಗ ನಡೆದಿಹ ದಾರಿ
ಫಲವಿಲ್ಲದಾಗುವದು.

**ಸುಕುಮಾರ:**

[ಗಂಭೀರನಾಗಿ]

ಅಹುದು ತೀರದ ದಾರಿ !

(ತೆರೆಯು ಸರಿದು ಅರಮನೆಯ ಪಟಾಂಗಣವೂ ಒಳಭಾಗವೂ ಕಾಣಿಸಿಕೊಳ್ಳುವವು. ಇರ್ವರೂ ಅವುಗಳನ್ನು ಸಮೀಪಿಸುವರು.)

**ಸುಕುಮಾರ:**

ಅಯ್ಯೋ ! ಮತ್ತಿಲ್ಲಿಹುದು ಒಡೆದ ಕನ್ನಡಿಯಂತೆ
ವಿದ್ರೂಪವಿಹ ಕನಸು. ಚಿಮ್ಮುತಿಹ ಕಾರಂಜಿ
ನೀರಿನಾಟವನಾಡಿ ದಣಿಯುತಿದೆ. ಮೊದಲದುವೆ
ಮನದೆದುರು ತಿಳಿಬೆಳಕ ಬೀರಿ ಕುಣಿಯುತಲಿತ್ತು.
ಭೂಮಿತಾಯಿಯೆ ! ನಿನ್ನ ಸ್ಪರ್ಶವದು ಪಾವನವು.
ಆದರೀ ನಿನ್ನಣುಗರಾಟನೋಟಗಳಲ್ಲಿ
ಬಯಕೆಬೆರಕೆಗಳಲ್ಲಿ ಚಲಿಸದಲೆ ನೆಲೆಸಿಹುದು
ಬೆಳಕನೆಲ್ಲವನಿಲ್ಲದಾಗಿಸುವ ಕಾರಿರುಳು.

**ಕುಮಾರ:**

ಇತ್ತ ನೋಡಲಿ ಗೆಳೆಯ ! ರಂಗಮಹಲಿನ ಚೆಲುವ.
ಮಾಣಿಕದ ಮೂರ್ತಿಗಳು ಸಾಲುಸಾಲಾಗಿಹವು
ಸ್ವರ್ಣಸ್ತಂಭಗಳಲ್ಲಿ. ಬಹು ಬೆಲೆಯ ಪೀಠಗಳು
ಕೂಡಲಿಕೆ ಕರೆಯುವವು. ಮುತ್ತುಗಳ ಪರದೆಗಳು
ಮುದ್ದು ಮುದ್ದಾಗಿಹವು. ಯಾವ ರಜನಿಯಲೇನೊ
ಇದರ ರಾಣಿಯು ಹೊತ್ತಿಸಿರುವ ದೀಪಾವಳಿಯು
ಕಳೆಗುಂದದುರಿಯುತಿದೆ. ನಿನ್ನ ಕಾಣ್ಕೆಯು ದಿಟವು.
ಕನಸಿನಲಿ ಕಂಡಿಲ್ಲವೀ ತೆರದ ಐಸಿರಿಯ !
ನಡೆ ಬೇಗ ! ರತ್ನಪಕ್ಷಿಯ ಕಂಡು ಮರೆವೊಕ್ಕು
ಇದನೆಲ್ಲ ದೊರಕಿಸುವ !

[ಕುಮಾರನು ಆತುರನಾಗಿ ಅರಮನೆಯ ಒಳಕ್ಕೆ ಪ್ರವೇಶಿಸುವನು, ಸುಕುಮಾರನು ದಿಙ್ಮೂಢನಾಗಿ ಅಲ್ಲಿಯೇ ನಿಂತಿರುವನು.]

**ಸುಕುಮಾರ:**

(ಶೋಕಿಸುತ್ತ)

ಓ ಮರುಳು ಕಲ್ಪನೆಯೆ !
ನೀನು ಕಂಡಿರುವದಕೆ ಇಲ್ಲಿ ನಾ ಕಾಣ್ಬುದಕೆ
ಅಂತರವದೆನಿತೆನಿತೊ ! ಮುಗಿಲಿನಿಂದಿಳಿದಂತೆ,
ಇಳಿದಿಳೆಯ ಮೇಲ್ನಿಂತ ದಿವ್ಯವೈಭವದಂತೆ
ಕಂಗೊಳಿಸುತಿರುವ ಪ್ರಾಸಾದವಿಂದಿಳೆಯಾಣ್ಮ-
ರೆಲ್ಲ ತಮ್ಮೈಸಿರಿಯ ಬಣ್ಣಿಸಲು ನಿರ್ಮಿಸಿದ
ಹರ್ಮ್ಯದಂತಿರುತಿಹುದು. ಮಿಳಿರ್ವ ರೆಕ್ಕೆಗಳಿಂದ
ಸಂಚರಿಪ ಸುರನಿಕಾಯವು ಶಿಲ್ಪಸಮುದಾಯ
ವಾಗಿಹುದು. ಇದಕಲ್ಲ ನಾನಿಲ್ಲಿ ಬಂದಿಹುದು.
ಅಕ್ಕರೆಯ ರತ್ನಪಕ್ಷಿಯನು ಕಾಣಲು ಬಂದೆ.
ಅದರ ಸಂಪದವೆಲ್ಲವೀ ರೂಪುವೆತ್ತಿರಲು
ನನ್ನ ಪಕ್ಷಿಯನಾವ ಮೋಡಿಯಲಿ ಕಾಣುವೆನೊ !

ದೇವದೇವನೆ ಗತಿಯು ! ಮುಡುಪನ್ನು ಸಲ್ಲಿಸಲು,
ಆಣತಿಯನಿತ್ತಿಲ್ಲ ! ಸೌಂದರ್ಯದಿಂಚರದ–
ರಾಜತೇಜಕೆ ಸಾಜವಾಗಿ ಸಿರಿವನೆಯಾದ–
ವಿಹಗವನು ಗಮನಿಸಲು ಏಳು ಕಡಲನು ದಾಟಿ
ಮಲ್ಲಿಗೆಯು ಮುಡಿದಂದು ಅಮೃತದಿನವಿದೆಯೆಂದೋ ?

**ಕುಮಾರ:**

(ಒಳಗೆ ನಿಂತಲ್ಲಿಯೇ ರಭಸದಿಂದ ಕೂಗುವನು.)

ಸುಕುಮಾರ ! ಇಲ್ಲಿ ಬಾ ! ನಿನ್ನ ಕನಸಿನ ಪಕ್ಷಿ !
ಮೌನವಾಗಿರುತಿಹುದು. ಮಾತನಾಡಿಸಲೇಳು !

**ಸುಕುಮಾರ:**

(ಆತುರನಾಗಿ)

ಎಲ್ಲಿ ? ಪಕ್ಷಿಯದೆಲ್ಲಿ ? ಅರ್ಣವವ ಕಾಣದಲೆ
ಭೂಮಿಯಲಿ ತೊಳಲುತ್ತ ಕಡೆಗೊಮ್ಮೆ ಕಂಡಿರುವ
ತೊರೆಯಂತೆ ಬೆರೆಯುವೆನು. ರತ್ನಪಕ್ಷಿಯದೆಲ್ಲಿ ?

(ಸುಕುಮಾರನು ಶೀಘ್ರವಾಗಿ ಒಳಕ್ಕೆ ಪ್ರವೇಶಿಸುವನು. ತೆರೆಯು ಸರಿದು ಅಂತಃಪುರದಲ್ಲಿಯ ಒಂದು ಮಂದಿರವು ಕಂಡುಬರುವದು. ಅಲ್ಲಿರುವ ರತ್ನಪಕ್ಷಿಯ ಪಂಜರದ ಬಳಿ ನಿಂತಿದ್ದ ಕುಮಾರನನ್ನು ನೋಡುತ್ತ ಸುಕುಮಾರನು ಪ್ರವೇಶಿಸುವನು.)

**ಕುಮಾರ:**

(ಆನಂದಾಭಿಮಾನಗಳಿಂದ)

ಇಲ್ಲಿ ! ಅರಸಿದೆನದನು ಕಡುಜಾಣ್ಮೆಯನು ತೋರಿ.
ರಂಗಮಹಲನು ತೊರೆದು ಅರಸಿಯಂತಃಪುರದ
ಇರ್ಕಡೆಯ ದ್ವಾರಗಳ ತೆರೆದಲ್ಲಿ ಕಾಣದಲೆ
ಒಳನುಸುಗಿ, ಸ್ವರ್ಣಸಿಂಹಾಸನದಿ ಕುಳ್ಳಿರ್ದು
ಅರಸ ತನ್ನರಸಿಯೊಡನಿನಿವೇಟವಾಡಿರ್ದ
ಪ್ರಣಯದಾಗರದಲ್ಲಿ ಎಸೆದಿರುವ ಹೂವುಗಳ
ಜಸವೆಲ್ಲ ಕಳೆಗುಂದಿ ಅದರ ವಾಸನೆಯೊಂದು
ಮನವನ್ನು ರಮಿಸುತಿರೆ, ಅಲ್ಲಿ ನಿಲ್ಲದೆ ಜಾರಿ

ಸಕಲ ಪಾವನತೆಗೆಂದೆಂದವರು ಕಾಯ್ದಿರಿಸಿ
ದಾಲಯದಿ ಕಾಲಿಟ್ಟೆ. ಒಡನೆ ತಡೆಯಿತು ಬೆಳಕು.
ನವರತ್ನಗಳ ಕೆಚ್ಚು ಹೆಚ್ಚಿಸಿದ ಪ್ರಭೆಯಿಂದ
ಸೂಸುತಿಹ ಗದ್ದಿಗೆಯ ಮೇಲೆ ಸೂರ್ಯಾರುಣರು
ಕರಗಿ ಜರುಗಿದ ಬೆಳ್ಳಿಯೊಂದು ಮಾಮರವಾದ
ಶೋಭೆಯಿರೆ ರೆಂಬೆಗಳು ಸೌದಾಮಿನಿಯು ತೆರದಿ
ನುಣ್ಪುವೆತ್ತವು, ಎಲೆಗೆ ಪಚ್ಚೆವರಣವು ಬಂತು.
ನೀಲವರ್ಣದ ಪಕ್ಷಿ ಮರದ ತುದಿಯಲಿ ಕುಳಿತು
ಮನದಿ ಧೇನಿಸುತ್ತಿತ್ತು. ನಾನು ಬಳಿಸಾರುತಿರೆ
ರೆಕ್ಕೆಗಳ ಕದಲಿಸುತ ನಿಮಿಷಮಾತ್ರದಿ ರತ್ನ–
ಮಯವಾಗಿ ಬಣ್ಣವನು ಬದಲಿಸಿತು. ಕನಸಿಗನು
ನೀನದನು ಕಾಣಬೇಕೆಂದೆಣಿಸಿ ಕರೆತಂದೆ,
ನೋಡದನು; ಇಂದೆಮ್ಮ ಬಯಕೆ ಕೈಗೂಡುವದು !

**ಸುಕುಮಾರ:**

(ಅತೀವ ವೇದನೆಯಿಂದ)

ಅಯ್ಯೋ ! ನಾ ತಿಳಿದಂತೆ ಇಲ್ಲಿ ಬೆಳೆ ಬಂದಿಹುದು.
ರತ್ನಪಕ್ಷಿಯು ಮಾಯವಾಗಿ ನೀಲಾಂಬರದಿ
ಇಲ್ಲೆಲ್ಲ ಕನಸು ವಿದ್ರೂಪವನು ತಳೆದಂತೆ
ಪಾರ್ಶ್ವದೃಷ್ಟಿಯ ಮಾತ್ರ ಪ್ರೇರಿಸುವ ನೋಟವಿದು–
ಹಕ್ಕಿಗಿಹ ದೇಹಪಂಜರವೊಂದು–ನಿಂತಿಹುದು.
'ರತ್ನಪಕ್ಷಿಯೆ' ಎಂದು ಅದನು ಕರೆದುದು ನಿಜವು.
ಆದರೆನ್ನಯ ಬಗೆಯ ಸವಿಯನುಂಡಿಹ ಪಕ್ಷಿ
ನೀಲವರ್ಣದ ಪಕ್ಷಿ ! ಗಗನಕಿಹ ನೀಲಿಮತೆ
ಅದರ ತಾಯ್ನಾಡಹುದು. ಅದರನಂತತೆಯಲ್ಲಿ
ಮುಳುಗುತೇಳುತ ಸಾಗಿ ಕಾಲಪಥವನು ಮೀರಿ
ಹಕ್ಕಿ ಲೀಲೆಯಲಿಹುದು. ಅದನು ಕಾಂಬುದು ಗೆಳೆಯ !
ಇಲ್ಲಿಹುದು ರತ್ನಪಕ್ಷಿಯ ನಾಮರೂಪವದು.

(ವಿಷಣ್ಣವದನನಾದ ಸುಕುಮಾರನು ಹಿಂತಿರುಗಿ ಬಂದು ಮಹಾದ್ವಾರದ ಎದುರಿನ ಬಯಲಿನಲ್ಲಿ ನಿಲ್ಲುವನು. ಕುಮಾರನು ಅವನನ್ನು ಸಂದೇಹಮಾನಸನಾಗಿ ಹಿಂಬಾಲಿಸುವನು.)

**ಕುಮಾರ:**

(ಉದಾಸೀನನಾಗಿ)

ಇಲ್ಲಿ ನಮ್ಮಯ ದಾರಿ ಕೊನೆವುಗುವುದೆಂದಿದ್ದೆ.
ಸಹಿಸೆನೀ ವೇದನೆಯ. ಅಲೆಯುವದು ಸಾಕಿನ್ನು !
ಮಾಯವಾಗಿಹ ಪಕ್ಷಿ ತನ್ನ ಬೀಡಾರವನು
ಬಿಟ್ಟಿಹುದು. ಎಲ್ಲ ವೈಭವವನ್ನು ಭೋಗಿಸುತ
ನಲಿಯುತಿರುವೆನು ಕುರುಹಿಗೆಂದಿಲ್ಲಿ ನೆಲೆಸಿರುವ
ರೂಪವನು ಪೂಜಿಸುತ; ನೀನು ಮುಂದಕೆ ಸಾಗು !
ಕಣ್ದೆರೆದು ನಾನೊಮ್ಮೆ ಕಂಡಿರುವ ಪಕ್ಷಿಯನು
ನೋಳ್ಪುದಾದರೆ ನೀನು ಈ ಕಾಡು ಜೀವವನು
ಮರೆಯಬೇಡೆಲೆ ಗೆಳೆಯ !

**ಸುಕುಮಾರ:**

(ಗಂಭೀರನಾಗಿ)

ಅಹುದು; ತೀರದ ದಾರಿ.
ನಿನ್ನುಳಿದು ನಾ ನಡೆವುದೆಂತು ? ಇರ್ವರು ಕೂಡಿ
ಇಲ್ಲಿಗೈತಂದಿಹೆವು. ಲಭಿಸೆ ಮೋಕ್ಷವದೊಂದು
ಇರ್ವರಿಗೆ–ಇಲ್ಲದಿರೆ ದಾರಿ ಬಳಲಿಕೆಯೆಮಗೆ.
ನಿನಗೆ ಬೇಸರವೆನಿಸೆ ಕುಳ್ಳಿರ್ದು ಭುಜದಲ್ಲಿ
ಪಯಣವನು ಬೆಳೆಸಯ್ಯ, ಕಾಣುವೆವು ಪಕ್ಷಿಯನು.

(ರತ್ನಪಕ್ಷಿಯು ದೂರ ಆಕಾಶದಲ್ಲಿ ಕಾಣಿಸಿಕೊಳ್ಳುವದು. ಸುಕುಮಾರನು ಅದರ ರೂಪವನ್ನು ನೋಡಿ ಸ್ವರವನ್ನು ಆಲಿಸುವನು.)

ಹಾ ಕಾಣುತಿದೆ ನೋಡು ! ಮುಗಿಲೆಡೆಗೆ ಸಂಚರಿಸಿ !

(ಕೈಯೆತ್ತಿ)

ಬಳಲಿರುವ ದಾರಿಗರು ನಾವು, ರಕ್ಷಿಸು ಪಕ್ಷಿ !
ರತ್ನಮಯವಾಗಿಸೀ ಕಾಡುಜೀವಗಳನ್ನು !

**ಕುಮಾರ:**

(ಆತುರತೆಯಿಂದ ಮುಖವನ್ನು ಮೇಲೆತ್ತಿ)

ಎಲ್ಲಿಹುದು ? ಎಲ್ಲಿಹುದು ? ಹಕ್ಕಿಯಂದದಿ ಹಾರಿ
ಅದರ ಸಾನಿಧ್ಯವನು ಪಡೆಯುವೆನು. ಇಹುದೆಲ್ಲಿ ?

**ರತ್ನ ಪಕ್ಷಿ:**

[ದೂರ ಮುಗಿಲೊಳಗಿಂದ ಹಾಡುವದು]

"ಪರ್ವತಶ್ರೇಣಿಗಳ ಶೃಂಗಗಳನೇರಿ
ಸೊಂಪುವಡೆದಿಹ ಬನದ ಮೇರೆಗಳ ಮೀರಿ
ತಾರೆಗಳ ಕಿರುನಗೆಯನಲ್ಲೆಡೆಗೆ ಬೀರಿ
ರತ್ನಪಕ್ಷಿಯ ಪಡೆಯ–
ಲೆಂದು ಮನಸಿರಲು
ಕಾಂತಿಮಯವಾಗಿಸಲು
ಒಂದು ಕನಸಿರಲು:
ಹಿಂತಿರುಗುವರೆ ಕಂದ ! ನೋಡುವರೆ ಹಿಂದೆ !
ಬಾ ಮುಂದೆ ! ಬಾ ಮುಂದೆ ! ಬಾ ಮುಂದೆ ಮುಂದೆ !
ಬಾಳಿನಲಿ ಬೀಳಾದ ಭಾವಗಳನುಳಿದು
ಉಜ್ವಲೋಜ್ವಲಿತವಹ ಜ್ವಾಲೆಗಳ ತಳೆದು
ಅವುಗಳಿಂದಂತ್ಯವಿಲ್ಲದ ಪ್ರಭೆಯು ಬೆಳೆದು
ರತ್ನಪಕ್ಷಿಯ ಪಡೆಯ–
ಲೆಂದು ಮನಸಿರಲು,
ಕಾಂತಿಮಯವಾಗಿಸಲು
ಒಂದು ಕನಸಿರಲು:
ಹಿಂತಿರುಗುವರೆ ಕಂದ ? ನೋಡುವರೆ ಹಿಂದೆ ?
ಬಾ ಮುಂದೆ ! ಬಾ ಮುಂದೆ ! ಬಾ ಮುಂದೆ ಮುಂದೆ !!
ವಿಶ್ವಜೀವನದೊಳಗೆ ಜೀವವನು ಬೆರಸಿ
ಕ್ಷಣಿಕ ವೈಭವದಾಸೆಗಳನೆಲ್ಲ ಮರಸಿ
ಮುಂದೆ ಬಹ ಚೆಂದದಲಿ ಜೀವಿತವನಿರಿಸಿ

ರತ್ನಪಕ್ಷಿಯ ಪಡೆಯ–
ಲೆಂದು ಮನಸಿರಲು
ಕಾಂತಿಮಯವಾಗಿಸಲು
ಒಂದು ಕನಸಿರಲು;
ಹಿಂತಿರುಗುವರೆ ಕಂದ ? ನೋಡುವರೆ ಹಿಂದೆ ?
ಬಾ ಮುಂದೆ ! ಬಾ ಮುಂದೆ ! ಬಾ ಮುಂದೆ, ಮುಂದೆ !!

[ಪಕ್ಷಿಯು ಮಾಯವಾಗುವದು.]

**ಕುಮಾರ:**

[ಶಾಂತನಾಗಿ]

ಕೇಳಿದೆಯ ಆ ದಿವ್ಯವಾಣಿಯನು ? ನಡೆಯಿನ್ನು.
ದಾರಿ ಕೊನೆವುಗುವನಕ ಜೀವಕಾಸರೆಯೆಲ್ಲಿ ?

**ಸುಕುಮಾರ:**

[ಧೀರೋದಾತ್ತನಾಗಿ]

ಅಹುದು. ತೀರದ ದಾರಿ. ಆದರದರಿನಿದನಿಯು
ಕರೆಯುತಿರೆ ಮುಂಬರಿಯದಿರುವ ಮಾನವನಿಹನೆ !
ನಡೆ ಮುಂದೆ. ಬಾಳ್ಮೆಯಿದೆ ಮುಂದೆ–ಬಹುಮುಂದೆ !

(ಇರ್ವರೂ ತೀರದ ದಾರಿಯಲ್ಲಿ ಸಾಗುತ್ತ ಮತ್ತೆ ಪಯಣ ಬೆಳೆಸುವರು. ಸಂಧ್ಯಾಕಾಲದ ಕಾಂತಿಯಿಂದ ಉಜ್ವಲವಾಗಿದ್ದ ಗಿರಿಕಂದರಗಳೂ ಅನಂತ ವಿಶ್ವವೂ ಅವರೆದುರು ಕಾಣಿಸಿಕೊಳ್ಳುವವು)

ಡಿಸೆಂಬರ ೧೯೩೧

# ಪತನ

## (ಮೊದಲು ಮಾತು)

ನಾನು ೧೯೨೭ ರಲ್ಲಿ ಕಂಡ ಒಂದು ಕಣಸನ್ನು ಅವಲಂಬಿಸಿದ ದೃಶ್ಯಾತ್ಮಕ ಕವನವಿದು. ಕಣಸೂ ಅದರಿಂದ ಸೂಚ್ಯವಾದ ಭಾವವೂ ನನ್ನ ಅನೇಕ ಚಿಕ್ಕ ಕವಿತೆಗಳಲ್ಲಿ ಸುಳಿಯುತ್ತಿದ್ದವು. ೧೯೩೨ ರಲ್ಲಿ ಅವಕ್ಕೆ 'ಪತನ'ದ ರೂಪವನ್ನು ಕೊಟ್ಟೆನು. 'ಒರ್ವ ಸುರನ ವಾಣಿ, ಹಾಗು 'ಒಂದು ಅಶರೀರ ವಾಣಿ'ಯು ಹೇಳುವ ಮಾತುಗಳು ನಾನು ನಿರೂಪಿಸ ಬೇಕಾಗಿದ್ದ ಭಾವನೆಯಿಂವ ಸೂಚ್ಯವಾದ ತತ್ವಗಳಾಗಿ ಒಳಸೇರಿ ದೃಶ್ಯದ ಸಮಗ್ರತೆಯನ್ನು ಕಾಯ್ದಿವೆ. ಋಷಿಯ ಮಾತುಗಳಲ್ಲಿ ಎಷ್ಟೋ ಭಾಗವು ಬಂದಿದ್ದೂ ಆ ಭಾವನೆಗೆ ಪುಟಕೊಡಲೆಂದು ಉಳಿದ ಸನ್ನಿವೇಶವನ್ನೆಲ್ಲ ಕಣಸಿನಲ್ಲಿದ್ದಂತೆ ಚಿತ್ರಿಸಿದೆ. ಆದರೆ ಋಷಿಯು ತಾಣದಲ್ಲಿ ಪಾಮರನಾದ ನನ್ನನ್ನು ಸೇರಿಸಬೇಕು ಮಾತ್ರ !

ಇಲ್ಲಿಯ ಮೂಲ ಭಾವನೆ ಹೀಗೆ: ಮಾನವನು ಸಮಗ್ರವಾದ ಸೌಂದರ್ಯವನ್ನಾಗಲಿ—ತನ್ನ ಆನಂದದ ನೆಲೆಯನ್ನಾಗಲಿ ಕಾಣುವದು ಅಷ್ಟೊಂದು ಬಿಗಿಯಲ್ಲ. ಆದರೆ ಆ ಸೌಂದರ್ಯದ ಇಲ್ಲವೆ ನೆಲೆಯ ಅನುಭ ವವು ಅವನಿಗೆ ದೊರೆಯಬೇಕಾದರೆ ಅವನಲ್ಲಿದ್ದ ಮಾನವೀಯ ದುರ್ಬಲತೆ ಯೆಲ್ಲ ತೊಲಗಬೇಕು. 'We are all lost children of the stars' (ನಾವೆಲ್ಲರೂ ಚಿಕ್ಕೆಗಳ ಮಕ್ಕಳು; ದಾರಿ ತಪ್ಪಿಸಿಕೊಂಡು ಅಲೆಯುತ್ತಿದ್ದೇವೆ) ಎಂದು ಎ. ಇ. ಹೇಳಿದ್ದಾರೆ. 'ಮಾನವನೆಂದರೆ ಪತನಹೊಂದಿದ ದೇವದೂತ' ಎಂಬ ಕಲ್ಪನೆಯೂ ಸರ್ವಶ್ರುತವಿದೆ. ಮಾನವನು ಜನ್ಮತಃ ಧ್ಯೇಯ ವಾದಿಯೇನೋ ನಿಜ. ಧ್ಯೇಯವನ್ನು ಅವನು ಕಣ್ಣಾರೆ ನೋಡಬಹುದು. ಅದನ್ನು ತನ್ನ ಜೀವನದಲ್ಲಿ ನುರಿಸಲು ಮಿತಿಮೀರಿ ಸಾಹಸಪಡಬಹುದು. ಆದರೆ 'ಸಾಹಸಕೆ ನೆರವಿಲ್ಲ. ಗೆಲುವೆಲ್ಲಿ !' ಎಂಬುವಂತೆ, ದೈವಿಕ ಕರುಣೆಯು ಅವನ ದುರ್ಬಲತೆಯನ್ನು ಮಾಯವಾಗಿಸುವ ತನಕ ಮಾನವನು ಕಾಯಬೇಕಾಗುವದು.

ಇಂಥ ಒಂದು ಭಾವನೆಯನ್ನು ವ್ಯಕ್ತಗೊಳಿಸುವಾಗ ಕವನವು 'ವಿಚಾರಿತ–ರಮಣೀಯ'ವಾಗುವದು ಅಗತ್ಯವಾಗಿದೆ; ವಿಚಾರಪರಿಪ್ಲುತ ವಾಗಿದೆಯೆಂದೂ ಕೆಲವರಿಗೆನಿಸಬಹುದು. ನಾನು ಇಷ್ಟು ಮಾತ್ರ ಹೇಳ ಬಲ್ಲೆ; ಇಲ್ಲಿರುವದು ಕೇವಲ ವಿಚಾರವಲ್ಲ; ನನ್ನ ಹೃದಯವನ್ನೇ ಅಲ್ಲೋಲ ಕಲ್ಲೋಲವಾಗಿಸಿದ ಒಂದು ಪ್ರತೀಕ, ಭಾವನೆ; ನನ್ನ ಆನಂದ – ವಿಷಾದ ಗಳನ್ನುಂಡು ಪುಷ್ಟವಾದ ರಸ.

ಗೆಳೆಯರ ಮಾತುಗಳ ಮೇರೆಗೆ ಕವನವನ್ನು ಅಲ್ಲಲ್ಲಿ ತುಸು ತಿದ್ದಿದ್ದೇನೆ.

ಈ ದೃಶ್ಯವನ್ನೋದಿ 'ತಲೆಶೂಲಿ'ಯೆದ್ದಿತೆಂದು **'ಪ್ರೇಮ'**ದಲ್ಲಿ ಒಬ್ಬ ವಿಮರ್ಶಕರು ಬರೆದಿದ್ದಾರೆ. "ಎಂತಹ ದಪ್ಪಾದ ಕನ್ನಡಕಗಳನ್ನು ಹಚ್ಚಿ ಕೊಂಡರೂ ಈ ರುದ್ರದೃಶ್ಯವು ನಮಗೆ ಗೋಚರವಾಗಲೊಲ್ಲದು. ಮುಗಿಲು ನಾಡಿನ ಮೇಲಿನ ಮುಗಿಲಿಗೆ ಹಾರಬೇಕೆಂದು ಹವಣಿಸಿದರೆ ನಮ್ಮ ಅಧಃಪತನವಾಗುವದೆಂದು ಅಂಜಿ ಆ ಹವ್ಯಾಸವನ್ನು ಬಿಟ್ಟೆವು" ಎಂದು **'ಕರ್ನಾಟಕ ವೈಭವ'**ದಲ್ಲಿಯ ವಿಮರ್ಶಕರು ಬರೆದುಕೊಂಡಿದ್ದಾರೆ. ಇದು ಎಷ್ಟರ ಮಟ್ಟಿಗೆ ಈ ವಿಮರ್ಶಕರ ದೇಹಮನಃಸ್ಥಿತಿಯ ಪರಿಣಾಮವೊ ಹಾಗು ಕವನದಲ್ಲಿಯ ದೋಷಗಳ ಪರಿಣಾಮವೋ ನೋಡಬೇಕಾದಂಥ ವಿಷಯ.

ಸರಳ ರಗಳೆಯು—ವಿಶೇಷತಃ **'ಪತನ'**ದಲ್ಲಿಯ ಸರಳ ರಗಳೆಯು—ಯಾಂತ್ರಿಕವಾಗಿದೆಯೆಂದು **'ಜಯಕರ್ನಾಟಕ'**ದಲ್ಲಿಯ ಒಬ್ಬ ವಿಮರ್ಶ ಕರು ಆಕ್ಷೇಪಿಸಿದರು. ಎಲ್ಲ ಭಾಷೆಯು—ಗದ್ಯವೂ ಕೂಡ–ಯಾಂತ್ರಿಕ ವೆಂಬುದನ್ನು ನಾನು ಅವರಿಗೆ ತೋರಿಸಬಲ್ಲೆ. ಯಂತ್ರದಲ್ಲಿ ಮಂತ್ರವನ್ನು ಊದುವದೇ ಕಲೋಪಾಸಕನ ಕಾರ್ಯವಾಗಿದೆ. 'ಪತನ'ದಲ್ಲಿ—ಯಾವ ಸರಳ ರಗಳೆಯಲ್ಲಿಯೂ ಕೂಡ–ಈ ಮಂತ್ರ, ಈ ಶಬ್ದ–ಛಂದಗಳ ಸಂಗೀತ ವಿದೆಯೋ ಇಲ್ಲವೋ ಎಂಬುದೇ ನಿಜವಾದ ಪ್ರಶ್ನೆ. ಮಂತ್ರವನ್ನು ಕೇಳುವ ಇಚ್ಛೆಯಿದ್ದರೆ ಯಾವ ರಸಿಕನಾದರೂ ಒಂದು ಯಾಂತ್ರಿಕ ಯೋಜನೆ ಯನ್ನು ಸ್ವೀಕರಿಸಲೇಬೇಕು. ಸರಳ ರಗಳೆಯು ಅಂಥದೊಂದು ಯೋಜನೆ.

ಪುಣೆ<br>೧೦–೧೧–೩೪ } **ವಿನಾಯಕ**

# ಪತನ

## (ಒಂದು ದೃಶ್ಯಾತ್ಮಕ ಕವನ)

[ಮುಗಿಲ **ಮೇಲೆ,**—ನಮ್ಮ ಕಣ್ಣು ಕಾಣುವ ತಾರೆಗಳ ವೈಭವದಾಚೆಗೆ ಒಂದು ದೊಡ್ಡ ಬಯಲು. ನಮಗೆ ಮೇಲೆ ಕಾಣುವ ಈ ಮುಗಿಲು ಆ ಬಯಲಿನ ಭೂತಲವೆನ್ನಬಹುದು. ಅಲ್ಲಿ ಎರಡು ಭವ್ಯವಾದ ಕೊತ್ತಳಗಳ ನಡುವೆ ಒಂದು ಮಹಾದ್ವಾರವಿದೆ. ಕೊನೆಯೇ ಇಲ್ಲದಾಗಿರುವ ಕೊತ್ತಳಗಳೂ, ದ್ವಾರವೂ ಮೇಲೆ ಮೇಲೆ ವಿರಾಜಿಸುವವು. ಈ ಮಹಾದ್ವಾರದ ಎದುರಿಗಿರುವ ವಿಶಾಲವಾದ ಬಯಲು ಪ್ರದೇಶದಲ್ಲಿ ದ್ವಾರದಿಂದ ತುಸು ದೂರಕ್ಕೆ ಒರ್ವ ತಪಸಿಯು ಕುಳಿತಿದ್ದಾನೆ. ಯೋಗಿಯ ಭುಜಗಳಲ್ಲಿ ರೆಕ್ಕೆಗಳಿರುವದು ಕಂಡು ಬರುವದು. ಅವನ ಮೋರೆಯ ಮೇಲಿನ ಕಳೆಯು ವಿಲಕ್ಷಣವಾದುದು. ಹರೆಯನ್ನೂ ಜರೆಯನ್ನೂ ಅರಿಯದಿರುವ ಆತ್ಮನ ಪ್ರಶಾಂತ ಪ್ರಸನ್ನತೆಯು ಅವನ ಮುಖದಲ್ಲಿ ಬೆಳಗುತ್ತಿರುವದು. ಕಾಲ—ದ್ವಾಪರಯುಗವಾಗಿರಬಹುದು. ಸಮಯ,—ಮುಂಜಾವಲ್ಲ ಸಂಜೆಯೂ ಅಲ್ಲ, ಹಗಲಲ್ಲ ರಾತ್ರಿಯೂ ಅಲ್ಲ. ಭೂಲೋಕದ **ಜ್ಯೋತಿ**ಗಳಾದ ರವಿ, ಚಂದ್ರ, ತಾರೆಗಳು ನಭೋಮಂಡಲದ ಕೆಳಗೆ ಸುಳಿಯುತ್ತಿರುವಾಗ ಕಾಲವಿಭಾಗವು ಸ್ವರ್ಗಲೋಕದಲ್ಲಿ ಹೇಗೆ ಬರಬೇಕು? ಹೀಗೆ ಮುಗಿಲುನಾಡಿನ ಮೇಲಿನ ಮುಗಿಲಿನಲ್ಲಿ ಒಂದು ಅಖಂಡವಾದ ಶಾಂತಿಯು ಮಾತ್ರ ನೆಲೆಸಿರುವದು. ಬೆಳಕು ಕತ್ತಲೆಯೆಂಬ ಭೇದವೇ ಅಲ್ಲಿರುವದಿಲ್ಲ. ಇದನ್ನೆಲ್ಲ ನೋಡಿದಾಗ "There midnight's all a glimmer and noon a purple glow" ಎಂಬ ಉದ್ಗಾರವು ಮಾತ್ರ ಏಳುವದು.]

**ತಪಸಿ:**

ಇಂದ್ರಸಮರಾವತಿಯೆ ! ನಿನ್ನ ಕಂಡುದು ದಿಟವು.
ದಿಗ್ಭ್ರಾಂತನಂತೆ ಮಾನವ ಕೋಟಿಯೊಳು ಜನಿಸಿ
ಭೂಮಂಡಲವ ತಿರುಗಿ ತೊಳಲಿದೆನು. ಸೌಂದರ್ಯ—
ವೇ ಪರಮ ದೈವತವು ಎಂದೆಣಿಸಿ ಸಾಸಿರದ
ಬೆಲೆ ಬಾಳ್ವ ಕಾಲದಲಿ ಚೆಲುವ ತೂಗುತ ನಿಂತೆ.

ಇಳೆಯು ಮಳೆಗಾಲಗಳ ಮಿಂಚುಗಾರಿಕೆಯಂತೆ
ಚೆಲುವಿಕೆಯ ಕೈವಾಡವೆಂದರಿತು ಮುಂದೊಂದು
ಸಾಸಿರದ ಕಾಲವನು ತಾರೆಗಳ ಶಾಂತಿಯನು—
ತಾರೆಗಳ ನಾಡಿನೊಳು ನೆಲೆಸಿರುವ ಕಾಂತಿಯನು—
ಪಡೆಯಲೆಂದೆಳೆಸಿದೆನು. ಇಂದ್ರಿಯದ ಜೀವನವು
ನಂದಿತ್ತು ಕಾಳ್ಗಿಚ್ಚಿನಂದದಲಿ. ತಾಳ್ಮೆಯದು
ರೋಮ ರೋಮಗಳಲ್ಲಿ ನಿಮಿರ್ದಿತ್ತು. ಮಾನಸವು
ಮಾನಾರ್ಣವವ ಕೂಡಿ ನಿಂದಿತ್ತು. ಅಸುವೊಂದೆ
ಪರಮ ಹರ್ಷವ ಬೇಡಿ ಪಳಗಿತ್ತು. ಆನಂದವದು
ಮೌನದಾಚೆಯ ಕ್ಷೀರಸಾಗರವು. ಮತ್ತೊಂದು
ಸಾಸಿರದ ಕಾಲವನು ಉಗ್ರ ತಪನದಿ ಕಳೆದೆ.

ವಿಶ್ವಗಳನಾಳುವ ಸನಾತನರ—ಅನಿಮಿಷರ—
ಲೀಲೆಯಿಂದಿದರ ತಿರುಳನು ತಿಳಿವುದೆಂದೆಣಿಸಿ
ಸುರನಿಕಾಯದ ತನೂರುಹಗಳೆನಗಿರಲೆಂದು
ಬಯಸಿದೆನು. ನಿನ್ನೆ ಮಾಗಿದುದೆನ್ನ ಬಯಕೆಯದು.
ಪಕ್ಕಗಳ ಮೇಲೆತ್ತಿ, ಭೂಮಿಯಾಯತಿಯೆಲ್ಲ
ಒಂದು ಕ್ಷಣದಾಭಾಸವಿರೆ, ವಾಯುವೀಥಿಯಲಿ
ಮುಂಬರಿದು ದಿಙ್ಮಂಡಲವು ದಿನದ ಕನಸಾಗೆ
ಚಂದ್ರನನು ಬಲಗೊಂಡು ರವಿಯ ಕಣ್ಣನು ಕುಕ್ಕಿ
ತಾರೆಗಳನೆಡಗೊಂಡು ಮುಗಿಲ ಮೇಲಿಳಿದಿಹೆನು !
ಯಾವ ಬೇವಸವಿಲ್ಲವೀ ಬಟ್ಟ ಬಯಲಿನಲಿ.
ಕ್ಷುಧೆಯಿಲ್ಲ; ಹೀನ ಮಾನವರ ದುಮು-ದುಮುವಿಲ್ಲ;
ಕಾಲದಾಳಿಕೆಯಿಲ್ಲ. ಅಮರಾವತಿಯ ಕಂಡೆ;
ಕೊನೆಯ ಕಾಣದೆ ಮೆರೆವ ಕೊತ್ತಳದ ಕೋಟೆಯಿದು
ಅನಿಮಿಷರ ಬಾಳುವೆಯನೊಳಗೊಂಡು ನಿಂತಿಹುದು.
ಭೂದೇವಿಯೆಸಗುತಿಹ ದಿನದಿನದ ಹೆಚ್ಚಳದ
ಮೂಲವಿಲ್ಲಿರುತಿಹುದು, ಹಿಗ್ಗಿನ ನಿವಾಸವಿದು.

ಇಂದ್ರನಲ್ಲಿಗೆ ಹೋಗಿ ಅವನ ಸಾಸಿರ ಕಣ್ಣ—
ಳೆದುರೆನ್ನ ಮರ್ತ್ಯದೇಹವನೊಡ್ಡಿ ಹೊಂಬಸಿರ
ನನು ಕಂಡು ಅವನಲ್ಲಿ ವೇದನೆಯನುಸಿರುವೆನು.
ಅಮರತೆಯು, ಆನಂದದಮೃತವನು ಪಡೆಯುವೆನು.

(ಸುತ್ತು ನೋಡಿ)

ತೇಜವದು ಈ ಲೋಕದಿರವೆಂದು ತೋರುವದು.
ಕಣಕಣದಿ ಸೂಸುವದು. ಭೂಮಿಯಲಿ ಮೆರೆದೆನ್ನ
ಶಾಂತಿಯುತ ಮಾನಸವ ನಸುವೆ ಕಳೆಗುಂದಿಪುದು.
ತೆರೆದ ದ್ವಾರವ ಸೇರಿ ಮುಂದೆ ಸಾಗುವ ಮುನ್ನ
ಇಲ್ಲಿ ತುಸು ರಮಿಸುವೆನು.

(ತುಸು ಹೊತ್ತಿನ ಮೇಲೆ)

ತಾಳು, ತಾಳೆಲೆ ಮನವೆ !
ವಜ್ರಧಾರಿಯು ನೋಡಲಣಿಗೊಳಿಸುವಾರ್ಪುಳ್ಳ,
ನಿನಗೇಕಧೀರತೆಯು ? ನನ್ನ ಮಾನವ ಕೋಟಿ
ಜೀವಜೀವೇಶನೊಳು ಕದನವೆಸಗುವದೇನು ?
ಹರ್ಷಸ್ಪಂದನ ಕಾಲವೀಗ ಬಂದೊದಗಿಹುದು.

[ಅಷ್ಟರಲ್ಲಿ ಕೋಲ್ಮಿಂಚಿನಂತಹ ಒಂದು ಬೆಳಕು ಕೋಟೆಯೊಳಗಿಂದ ಬಯಲಿನ ಮೇಲಿರುವ ಮುಗಿಲಿನಲ್ಲಿ ಸಾವಕಾಶವಾಗಿ ತೇಲಿ ಬರುವದು.]

ಸ್ವರ್ಗಲೋಕದ ಮಿಂಚು ! ಇದು ಏನು ? ಮಿಂಚಲ್ಲ.
ಅಳಿಯದಿದೆ. ನನಗಾಗಿ ಬಂದ ಸಂದೇಶವಿದು.
ಗಗನದಲಿ ಸ್ವಚ್ಛಂದವಾಗಿ ವಿಹರಿಪ ಹಕ್ಕಿ—
ಯಂತಲೆವ ಅಮರತೆಯು ಬಾಳಿಗಿಹ ನೀಳ್ಬೆಳಕೆ !
ಬೆಸನವೇನದು ಹೇಳು. ನಿತ್ಯಚರನಿಹೆಯೇನು ?
ಇಲ್ಲದಿರೆ ಮನದ ಸತ್ಯವನು ಕಡೆಗಾಣಿಸಲು
ಎದುರು ಬಂದಿಹೆಯೇನು ? ಓ ಬೆಳಕೆ ! ಓ ಬೆಳಕೆ !

(ಇಷ್ಟರಲ್ಲಿ ರೆಕ್ಕೆಯುಳ್ಳ ಕುದುರೆಗಳನ್ನೇರಿದ ಅನಿಮಿಷರು ಕೋಟೆಯ ಮೇಲಿನಿಂದ ಕ್ರಮವಾಗಿ ಬಂದು ಗಗನದಲ್ಲಿ ಸಂಚರಿಸಹತ್ತುವರು. ಕುದುರೆಗಳ ವರ್ಣವು ನೀಲಮಯವಾದುದು; ದೇವತೆಗಳೂ ಸಹ ಸಾದುಗಪ್ಪಾಗಿರುವರು.)

ಬೆಳಕಿನಡಿಯುಲಿ ಬೆಳಕು ! ಓ ವಿಶ್ವಪುರುಷರಿರಾ !
ತೇಜಮಯ, ಶಾಂತಿಮಯ, ಆನಂದಮಯವಾದ
ಆಕಾಶದಲಿ ಕ್ರೀಡಿಸುತಿಹ ದೇವತೆಗಳಿರಾ !
ಅಳಿವುಳಿವುಗಳ ತೆರೆಯನೋಸರಿಸಿ ದೇಹದೀ
ಪರಿಯನೆಲ್ಲವ ತೊರೆದು ಹಗಲು–ಕತ್ತಲೆಯೆಂಬ
ಭಾವನೆಯ ಸಿಂಪುಗಳನೊಡೆದ ಮೌಕ್ತಿಕಗಳಿರಾ !
ವಂದನೆಗಳಿವು ನಿಮಗೆ.

[ಕುಳಿತಲ್ಲಿ ಕೈಮುಗಿಯುವನು]

ಬರಿಯ ಪಾಮರ ನಾನು.
ಆದರೀ ನನ್ನ ಮಾನವ ಜನ್ಮವೆಸಗಿರುವ
ಕೀಳು ಗೆಯ್ಮೆಯನಿಲ್ಲದಾಗಿಸಲು ಸಾಸಿರದ
ಕಾಲಗಳನತಿ ಯುಗ್ರ ತಪನದಲಿ ಕಳೆದಿಹೆನು;
ಕಟ್ಟಳಲ ಕಟ್ಟರಸು, ಸಂತಸದ ಸಯ್ಧಾರೆ
ಯನು ಪಡೆಯಲೆಳಸುವೆನು. ಕಾರಣಿಕ ರತ್ನಗಳೆ!
ಕರುಣಿಪುದು. ಬೆಳ್ಮಾಡಬೇಡಿ ಮನದಾಸೆಯನು.

**ಒರ್ವ ಸುರನ ವಾಣಿ**

ಅಮರಾವತಿಯ ಸಾರುವಂಥ ಸ್ಕೃಪನು ಪಡೆದೆ.
ಅಮರನಾಗುವ ಬಗೆಯ ನೀನೆ ಕಾಣ್ಬುದು, ತವಸಿ!

**ತವಸಿ**

ಇಲ್ಲಿ ತೀರಿತು ನನ್ನ ತಾಪಸನ ಪುಣ್ಯವದು.
ಸಹಿಸೆನಿಲ್ಲಿಹ ಓಜತೇಜಗಳ, ಆಢ್ಯತೆಯ.
ಮನವನ್ನು ತೀವಿದುದು ಕ್ರಂದನವು; ಹುಮ್ಮಸವು
ಜೊಂಪಿಸಿತು, ಹೃದಯವದು ಕಂಪಿಸಿತು. ಅನಿಮಿಷರೆ!
ಅತಿಶಯದ ಮಾತಲ್ಲ, ಮಲ್ಲಿಗೆಯ ಮುಡಿದಂತೆ
ಸಾಜವಾಗಿಹ ಕಾರ್ಯವದು ನಿಮಗೆ. ಕರುಣಿಸಿರಿ.
ಇಂದು ನೀವೆನ್ನ ಬಿನ್ನಹಕೆ ವಶವಾಗದಿರೆ
ಒಂದು ಜೀವದ ಜ್ವಾಲೆ ವಿಶ್ವವನು ಜ್ವಲಿಸುವದು;

ಲೋಕಗಳು ಅಡಗುವವು; ಮಾನವ್ಯದೇಳಿಗೆಯು
ಅಭಿಮಾನಿಯಾದೆನ್ನ ಬಳ್ಳಿಯಂದದಿ ಸುತ್ತಿ
ಇನ್ನೊರ್ವ ಸಾಹಸಿಯು ಮುಂಬರಿದು ಬರುವನಕ
ನನ್ನೊಡನೆ, ನನ್ನೊಡನೆ ಪತನವನ್ನೈದುವದು.
ನಿಮ್ಮ ಹಿರಿಯಾನಂದದಮೃತಕಲಶವದೆಲ್ಲಿ ?
ನಿಮ್ಮ ಪರಿಪೂರ್ಣತೆಯು ದೊರೆವ ಸುಮವನವೆಲ್ಲಿ ?
ನೋಯಿಸುವ ಹೃದ್ಬಂಧಗಳು, ನೀವು ತಡೆದಿರಲು,
ಮರುಕ್ಷಣವೆ ನನ್ನನಿಲ್ಲಿಂದ ಮರೆಮಾಡುವವು.
ಕರುಣಾಳುಗಳು ನೀವು ನನ್ನನುಳಿಸದೆ ಇರಲು
ದೇವೇಂದ್ರನಿಂದ್ರಪದವಿಗೆ ಭಂಗವಹುದಲ್ತೆ ?

[ತವಸಿಯು ಕೈಮುಗಿಯುವನು. ಆಕಾಶದಲ್ಲಿದ್ದ ಬೆಳಕು ಮೆಲ್ಲನೆ ಮತ್ತೆ ತೇಲಲು ಪ್ರಾರಂಭವಾಗುವದು. ಮುಗಿಲಿನಲ್ಲಿ ಸ್ವಚ್ಛಂದವಾಗಿ ಕೋಟೆಯೆಡೆಗೆ ಹರಡಿಕೊಂಡಿದ್ದ ಅಶ್ವಾರೂಢರಾದ ದೇವತೆಗಳು ಕ್ರಮವಾಗಿ ಕೋಟೆಯಿಂದ ಮುಂದೆ ತವಸಿಯು ಕುಳಿತ ಬೈಲಿನ ಭಾಗದ ಮೇಲೆ ಹಾಯ್ದು ಹೋಗಲೆಸಗುವರು. ಹೀಗೆ ಒರ್ವರ ಹಿಂದೊರ್ವರು ಸಾವಕಾಶವಾಗಿ ಹೋಗುತ್ತಿರುವಾಗ ಆ ಬೆಳಕು ಪ್ರತಿಯೊರ್ವ ದೇವತೆಯ ಹಿಂದಿನಿಂದ ಬಂದು ಹಿಂಭಾಗದಲ್ಲಿ ನಿಂತು ಎಲ್ಲ ದೇವತೆಗಳ ಹೃದಯವನ್ನು ನಿಚ್ಚಳವಾಗಿ ತೋರುವದು; ಅದರ ಹೃದಯದೊಳಗಿನ ಸೂಕ್ಷ್ಮ ಚಲನವಲನೆಗಳೆಲ್ಲ ಸ್ಪಷ್ಟವಾಗಿ ಕಾಣುವಂತೆ ಮಾಡುವದು. ಅದಲ್ಲದೆ ಕನ್ನಡಿಯೊಳಗಿಂದ ಕಂಡುಬರುವ ಛಾಯಾಚಿತ್ರವಂತೆ—ಸುರರ ಹೃದಯವು ಎಷ್ಟು ತಿಳಿಯಾಗಿ, ನಿರ್ಮಲವಾಗಿರುವದೆಂಬುದನ್ನು ತೋರಿಸಲೇನೋ ಎಂಬಂತೆ—ಸುರರ ಹೃದಯದೊಳಗಿಂದಾಚೆಗೆ ಮೊದಲಿದ್ದಹಾಗೆ ಬೆಳಕು ಕಂಡುಬರುವದು. ಬೆಳಕಿನ ತೀವ್ರವಾದ ವರ್ಚಸ್ಸು ಹಾಗು ತವಸಿಯ ಮೇಲ್ನೋಟ,—ಇವುಗಳ ನಡುವೆ ಸುರರು ಕ್ರಮವಾಗಿ ಸಾಗಿರುವರೆನ್ನಬಹುದು. ಈ ಅದ್ಭುತವನ್ನು ನೋಡಲು ತವಸಿಯು ಮುಖವನ್ನು ಮೇಲೆತ್ತುವನು ]

**ಒಂದು ಅಶರೀರವಾಣಿ**

ಇದು ನನ್ನ ಬೆಳಕಿಹುದು. ಒರೆದು ನೋಡುವ ಬೆಳಕು,
ಆ ಮೇಲೆ ತನುಮನವನೆಲ್ಲ ತುಂಬುವ ಬೆಳಕು.
ಈ ಬೆಳಕಿನಲಿಯುಗವು, ಆದಿ, ಲಯ, ಕೊನೆಯಿಹುದು.
ಬಾಹ್ಯಸೌಂದರ್ಯವನು ಮೋಹಿಸುತ,–ದೈವಿಕತೆ—
ಪೂರ್ಣತೆಯ ತಿಳಿಯದಿಹ ಭವ್ಯಭಾವನೆಯೊಂದು
ಈ ಬೆಳಕಿನೆದುರು ಬರೆ ಬೀಳುತಿಹ ಛಾಯೆಯನು

ಲೋಕವೆಂದೆನುತಿಹರು. ವೋಹಿಸುತ ಕಳೆಯೇರಿ—
'ದೊಂದು ಜೀವವು ಬೆಳಕಿನೆದುರು ಗೋಚರವಾಗೆ
ಅರ್ಥ ಪಡಿನೆಳಲರ್ಥನೆಳಲಾಗಿ ಮಾನವನ
ಬಾಳ್ಮೆಯೆಂಬಭಿನಾಮವಾಂತಿಹುದು. ನೆರೆ ನೋಡು !
ಸುರರ ಹೃದಯಗಳೆಲ್ಲ ಈ ನನ್ನ ಬೆಳಕಿಗಿಹ
ದರ್ಪಣಗಳಂತಿಹವು. ದೋಷವಿನಿತಿನಿತಿಲ್ಲ.
ಮಾಜದಲೆ ಕುಂದದಲೆ ಬೆಳ್ಳ ಬೆಳಕಿಗೆ ದಾರಿ-
ಯಾಗಿರುವ ಎದೆಯುಹುದು ಪೂರ್ಣತೆಯ ತವರುಮನೆ.
ಬೆಳಕನನುರೂಪಿಸುವ ಕನ್ನಡಿಯು ತನಗಿರುವ
ರೂಹನಾದರು ಕಾಯ್ದುಕೊಂಡಿಹುದು. ಅರ್ಪಣದ
ಜೀವನವ ಸಾಧಿಸಿದ ಪರಿವಿಡಿಯನೀಕ್ಷಿಪುದು
ಸುರರ ಹೃದಯದ ಸೂಕ್ಷ್ಮ ಸೃಷ್ಟಿಯಲಿ. ಇದು ನಿನ್ನ
ಮನದಿ ಬಿಂಬಿಸುವನಕ ದೇವತೇಜವದರಿದು.
ಬ್ರಹ್ಮತೇಜಕೆ ನಿನ್ನ ಬಾಳು ಸೊತ್ತಾಗಿಹುದು.

[ಬೆಳಕು ನಿರ್ಜರರ ಹೃದಯವನ್ನು ಉದ್ದೀಪಿಸುವದು ಸಾಗುತ್ತಲೇ ಇರುವದು. ಈ ಪ್ರಖರವಾದ ತೇಜಸ್ಸನ್ನು ತಾಳಲಾರದೆ ತವಸಿಯು ಮೋರೆಯನ್ನು ಕೆಳಗೆ ಮಾಡುವನು. ಭಯಂಕರವಾದ ವ್ಯಥೆಯೊಂದು ಅವನನ್ನು ನೋಯಿಸುವದು ಮೋರೆಯ ಮೇಲಿಂದ ಕಂಡುಬರುವದು.]

**ತವಸಿ:**

ಅರಿದರಿದು ! ಓ ಬೆಳಕೆ ! ಧಗಧಗಿಪ ಸತ್ಯವೆ !
ನಿನ್ನ ತೇಜವು ಸಾಕು. ನೋಟ ಕಮರಲು ಬಹುದು,
ಕಂಗಳಿವು ಕುರುಡಾಗಬಹುದು. ನಿಲ್ಲಲೀ ದೃಶ್ಯ,
ಈ ದೃಷ್ಟಿಯದ್ಭುತವು ! ಮನದಲುದ್ಭವಿಸಿರುವ
ಬೇಗೆಯಿಂದೀ ಕ್ಷಣದಿ ಜೀವ ಬೇಳ್ದಿರಬಹುದು,
ಭಸ್ಮವಾಗಿರಬಹುದು ! ಎಲೆಲೆ ದೈವದ ಕೃತಿಯೆ !
ಅಡಗಿಸೀ ಭೀಷಣಾಕೃತಿಯೆನ್ನು ! ಮಾನವನು
ತೂಗುತಿಹ ತುಲೆಯ ಸಾಧನೆಯಾದ ಈ ಮತಿಯು

ದಿಕ್ಕೆಟ್ಟು, ದಿಗ್ಭ್ರಮಿಸಿ ಧಾವಿಸುತಲಿರಬಹುದು,
ಗಾಸಿಯಾಗಿರಬಹುದು ! ಅಮರಾವತಿಯು ಕಂಡೆ !
ಅಮರವಾಗಿಹ ನೋವನುಣುವ ಬಗೆಯನು ಕಂಡೆ !
ಕೊನೆಯಿಲ್ಲದಾಳವಿಲ್ಲದ ಶೋಕವನು ಕಂಡೆ !
ವಿಶ್ವ ಯತ್ನವದಿಂತು ವಿಫಲವಾಗಿರಲಿನ್ನು
ಯಾವ ಹಾದಿಯೊ ಕಾಣೆ ! ಬೀಳ್ದಿಹೆನು ! ಬೀಳುವೆನು !
ಇನ್ನಾವ ಗತಿಯೆನಗೆ ! ಇನ್ನಾರು ಗತಿಯೆನಗೆ !

[ಕೆಳಗೆ ಬಿದ್ದು ಹೊರಳಾಡುವನು. ಹೀಗೆ ಬಿದ್ದಿರುವಾಗ ಮತ್ತೆ ಮೇಲೆ ಸಾಗಿರುವ ಉದ್ದೀಪಿತ ನಿರ್ಜರರ ನೋಟವು ಕಣ್ಣಿಗೆ ಬೀಳುವದು.]

(ಎದ್ದು ಕುಳಿತು)

ಮಾನವೀಯತೆಯನಣಕಿಸುವ ಪೂರ್ಣತೆ ! ಎಲೆಲೆ !
ನ್ಯಾಯನಿಷ್ಠುರವಾದ ಸ್ವರ್ಣಲತೆ ! ನೀಳ್ಬೆಳಕೆ !
ಶಾಂತವಾಗಿರು ಇನ್ನು ಪದ್ಮಯುಗವರಳ್ವನಕ !
ಸ್ವರ್ಲೋಕದಾಳ್ವಾರರಾದ ದೇವತೆಗಳಿರ !
ಭೂಲೋಕದವನೆನ್ನ ಬೀಳ್ಕೊಡಿರಿ ! ತೆರಳುವೆನು.
ಉನ್ನತೋನ್ನತವಾದ ಪರ್ವತಶೃಂಗಗಳ
ಮೇಲ್ನಿಂತು ನಾ ತಪಿಸುತಿರುವಾಗ ಕಾಣುತಿಹ
ಭೂಮಂಡಲದ ವಿಶಾಂತೆಯು ಭೀಕರವಾಗಿ
ಬೆಳಕು ಮಳೆ ಬರುವನಕ ಸಾಸಿರದ ಸಾಸಿರವು
ಸಮೆಯಬೇಕೆಂದಿತ್ತು. ನನ್ನ ಜೀವಸವಹುದು
ಸಾಗರದ ಸಾವಿರಲೆಗಳ ಮೇಲೆ ಚೆಲ್ಲಿರುವ
ವಲ್ಲರಿಯು, ಸಾಹಸಕೆ ನೆರವಿಲ್ಲ. ಗೆಲುವೆಲ್ಲಿ ?
ಅಹಹ ! ಇಲ್ಲಿಯ ವಾಯು ತೇಜವನು ಬೀಸುವದು.
ಇಲ್ಲಿ ಕಾಣ್ಬದು ಕಣ್ಣು ಸಹಿಸಲಾರದ ಬೆಳಕು !
ಇಲ್ಲಿಯುಸಿರೆನೆ ಅಗ್ನಿಗಿಹ ಕಳೆಯು, ಮತ್ತಿಲ್ಲಿ
ನೆಲವು ನಿಗಿ ನಿಗಿ ಕೆಂಡ ! ಸುರಲೋಕವಿದು ಸುರರ

ಹೃದಯುದಂದದಿ ಬೆಳಕಿಗಿರುವ ದರ್ಪಣವತ್ತಿ ?
ತಡೆಯಲಾರೆನು. ಅಯ್ಯೋ ! ಮೈಗರೆಯುವಂತಾಯ್ತು.
ಬಾಳುವೆನು. ಅದಕಾಗಿ ಬೀಳುವೆನು. ಬೀಳುವೆನು.

[ಮೂರ್ಛಿತನಾದ ತವಸಿಯು ಸಾವಕಾಶವಾಗಿ ಆಕಾಶದಿಂದ ನೆಲಕ್ಕೆ ಬೀಳುವನು.]

ಎಪ್ರಿಲ್ ೧೯೩೨

# ಸೆಳವು

ಹಿಂದೊಮ್ಮೆ ನಾ ನುಡಿದ ಹಾಡ ಪಲ್ಲವಿಯ
ಮುಂದೆ ಸಡಗರದಿಂದ ಬರುತಿರುವ ಕವಿಯ
ಪದಕಿರಿಸಿ ಇನ್ನೊಂದು ಮಾತು ಹೇಳುವೆನು
ಇಂಥ ಕವನಗಳನ್ನೆ ಕಟ್ಟಿ ಬಾಳುವೆನು.

—ವಿನಾಯಕ

"The green young creeper of this life,
Upon the blood-red streams of Time
Has yet float, till from this strife,
Some Hand plucks it in its prime"

—*V. K. G.*

# ಸೆಳವು

## (ಮೊದಲು ಮಾತು)

ಈ ಕವನವನ್ನು ನಾನು ಬರೆದಿದ್ದು ೧೯೩೦ ನೆ ಇಸ್ವಿಯ ಮೊದಲು ತಿಂಗಳಲ್ಲಿ. ಅಂದಿನ ನಮ್ಮ ಸಮಾಜದ ಸ್ಥಿತಿಯನ್ನೂ ಉಳಿದ ಕೆಲವು ಮಾತುಗಳನ್ನೂ ಅನುಲಕ್ಷಿಸಿ ಬರೆದ ಕವಿತೆಯಿದು. ಅಜ್ಞಾನ, ಅನ್ಯಾಯ, ದುರ್ಬಲತೆ, ಘೋರ ಸಂಕಟ,–ಇವೆಲ್ಲ ಜೀವಿತದಲ್ಲಿ ಕಾಣುವ ಪ್ರತಿಕೂಲ ಪಾಶಗಳು. ಇವೆಲ್ಲವುಗಳ ಮೂರ್ತಿಯೇ ಪ್ರಕೃತಿ, ಶಕ್ತಿ, ಸೆಳವು. ಜೀವನ ದಲ್ಲಿ ಬೆರೆತುಕೊಂಡು ಸಮರಸವಾಗಲಿರುವ ಜೀವವನ್ನು ಇವು ಹೆದರಿಸು ವವು, ಬೆದರಿಸುವವು. ಜೀವವೇ ವ್ಯಕ್ತಿ, ಪುರುಷ. ಸೆಳವಿನ ಮಧ್ಯದಲ್ಲಿಯೂ ಸ್ಥಿರವಾಗಿ ನಿಂತು ತನ್ನ ವ್ಯಕ್ತಿತ್ವವನ್ನು ಸಂರಕ್ಷಿಸಿಕೊಳ್ಳುವದೇ ಪುರುಷ ಲಕ್ಷಣವೆಂದು ತಿಳಿದ ವ್ಯಕ್ತಿಯು ಶಕ್ತಿಯೊಡನೆ ಬೆಳೆಸಿದ ಸಂವಾದವು ಇಲ್ಲಿ ವರ್ಣಿತವಾಗಿದೆ. ಈ ಮೂಲ ಕಲ್ಪನೆಗಾಗಿ ಉದಾಹರಣೆಗಳೆಂದು ಸಾಮಾಜಿಕ ಇಲ್ಲವೆ ವೈಯಕ್ತಿಕ ಜೀವನದಿಂದ ಕೆಲವು ಸನ್ನಿವೇಶಗಳನ್ನು ಆಯ್ದುಕೊಂಡಿದೆ; ಇಷ್ಟೆ. ಮೊದಲನೆಯ ಭಾಗದಲ್ಲಿ ಸಂವಾದವು ಸಾಮಾ ಜಿಕ ಜೀವನದಿಂದ ಪ್ರಾರಂಭವಾಗಿ ವೈಯ್ಯಕ್ತಿಕ ಜೀವನಪ್ರಾಂತವನ್ನು ಪ್ರವೇಶಿಸುವದು. ಎರಡನೆಯ ಭಾಗದಲ್ಲಿ ಶಕ್ತಿಯು ಹೇಗೆ ಪ್ರತಿಕೂಲ–ವಾಗಬಹುದೆಂಬುದನ್ನು ವ್ಯಕ್ತಿಯು ತನ್ನ ಅನುಭವದ ಮೇಲಿಂದ ಬಣ್ಣಿಸುತ್ತಾನೆ. ಮೂರನೆಯ ಭಾಗದಲ್ಲಿಯ ಸನ್ನಿವೇಶವು ಕೇವಲ ಸಮಾಜಿಕವಾಗಿದೆ.

ಸಂವಾದಾತ್ಮಕವಾದ ಈ ಗೀತೆಯನ್ನು ಬರೆಯುವಾಗ ಟೆನಿಸನ್ ಕವಿಯ 'The Two Voices' (ಎರಡು ಧ್ವನಿಗಳು) ಹಾಗು ಬೇಂದ್ರೆಯವರ 'ಕನಸಿನಲ್ಲೊಂದು ಕಣಸಿ'ನ ರಚನಾಪದ್ಧತಿಯು ನನ್ನ ಮನಸ್ಸಿನಲ್ಲಿದ್ದಿತು.

ಸ್ವತಃ ನನಗೆ ಮೊದಲನೆಯ ಭಾಗದಲ್ಲಿ ಶಕ್ತಿಯು ಹೇಳುವ ಕೊನೆಯ ಮಾತುಗಳೂ ಎರಡನೆಯ ಭಾಗದಲ್ಲಿ ಅನೇಕ ಸಾಲುಗಳೂ ರಮ್ಯವಾಗಿವೆ ಯೆಂದೆನಿಸಿದೆ. ಈ ಕವಿತೆಯನ್ನು ಬರೆದಾಗ ನನ್ನ ಶೈಲಿಯು ಇನ್ನೂ ಅಷ್ಟೊಂದು ಸಮನಾಗಿ ಪಾಕಕ್ಕೆ ಇಳಿದಿರಲಿಲ್ಲ. ಆದಷ್ಟು ಮಟ್ಟಿಗೆ ಅಲ್ಲಲ್ಲಿ ತಿದ್ದಿದ್ದೇನೆ. ಇದು ಜಯಕರ್ನಾಟಕದಲ್ಲಿ ಅಚ್ಚಾದಾಗ ಕೆಲವು ಜನ ಮಹನೀಯರು ಮನವಾರೆ ನನ್ನನ್ನು ಅಭಿನಂದಿಸಿದರು. ಆದರೆ ಒಬ್ಬಿಬ್ಬ ಗೆಳೆಯರು ಈ ಹೊಸ ಸಂಗ್ರಹದಲ್ಲಿ ಮುದ್ರಿಸಲು 'ಸೆಳವು' ಯೋಗ್ಯ ವಾಗಿಲ್ಲೆಂದು ಅಭಿಪ್ರಾಯಪಟ್ಟರು. ಈ ಮಾತೆಲ್ಲ ನಿರ್ಣಯವಾಗಲೆಂದೇ ಇದನ್ನು ಜನತೆಯ ಮುಂದಿಟ್ಟಿದ್ದೇನೆ.

ಪುಣೆ
೧೦-೧೧-೩೪

ವಿನಾಯಕ

# ಸೆಳವು

## (ಶಕ್ತಿ ವ್ಯಕ್ತಿಗಳ ಸಂಘರ್ಷದ ಒಂದು ಕವಿತೆ)

### ಭಾಗ ೧

**ಶಕ್ತಿ:**

ಚಂಡ ಪ್ರಚಂಡ ತಾಂಡವವು ನಡೆದಿಹುದು;
ಅಂಡಜನ ಸೃಷ್ಟಿಯೇ ತಡವರಿಸುತಿಹುದು !

**ವ್ಯಕ್ತಿ:**

ಆವ ! ನೀನಾವ ! ನನ್ನಸು ಕಾವ ದೇವ ?
ರುದ್ರರೂಪವ ತಳೆದಿತೇ ನಿನ್ನ ಭಾವ ?

**ಶಕ್ತಿ:**

ಛಿನ್ನ ವಿಚ್ಛಿನ್ನಲೋಕದ ಮೃತ್ಯು ನಾನು;
ಬಿನ್ನಹದ ಬಿನ್ನಾಣ ನಿನ್ನಲ್ಲಿದೇನು ?

**ವ್ಯಕ್ತಿ:**

ಅಲ್ಲ ! ಬಿನ್ನಹವಲ್ಲವಿದು ಅಮಿತ ಶಕ್ತಿ !
ಸಲ್ಲದೆನಗೀಗ ನಿನ್ನಲ್ಲಿ ಅನುರಕ್ತಿ !
ನೀನೇನಿರುವೆ ಹೇಳಿ ನೀ ಮುಂದೆ ಸಾಗು;
ನನಗೆ ಬೇಸರವಿಹುದು ಈ ನಿನ್ನ ಸೋಗು.

**ಶಕ್ತಿ:**

ಜನತೆಯನು ಜೀವರಂಗದಿ ಕುಣಿಸುತಿಹೆನು;
ವನಿತೆಯರ ನೋಟದಿಂದವರ ಮಣಿಸುವೆನು.

ಅವರ ಭಾಗ್ಯೋದಯದ ರವಿ ಚಂದ್ರ ನಾನು;
ಅವರ ದುರ್ಭಾಗ್ಯಕಿರುತಿಹ ರಾಹು ನಾನು !

ವ್ಯಕ್ತಿ:

ಅರಿತೆ ನಿನ್ನಯ ಬಲವ ಘನಘೋರ ಶಕ್ತಿ !
ಇನ್ನು ನನ್ನಯ ವಿಮೋಚನೆಗೇನು ಯುಕ್ತಿ ?

ಶಕ್ತಿ:

ಜನರು ಪೂಜಿಸುವ ಹನುಮಂತ ನಾನಹುದು;
ನನ್ನಿಂದ ಅವರಿಗತಿಯಾದ ಬಲವಿಹುದು
ವಿಧಿಲಿಖಿತಜನ್ಯದುಃಖದ ದೂರು ಕೇಳಿ
ಮೊರೆಯಿಡುವ ಮಾನವರ ಅಭಿಮಾನ ತಾಳಿ
ತುಸುವಾದರೂ ಕಳೆವೆನವರ ಕ್ಲೇಶವನು;
ಶಿಥಿಲಗೆಯ್ವೆನು ಅವರನೆಳೆವ ಪಾಶವನು.
ಕೇರಿಕೇರಿಯ ಗುಡಿಗಳಲಿ ದುರ್ಗೆಯಾಗಿ
ವಾಸಿಸುವೆನವರ ಭದ್ರತೆಗೆಂದು ಹೋಗಿ.
ಹಳ್ಳಿಪಳ್ಳಿಯ ಜನರು ಆನಂದದಿಂದ
ಪೂಜಿಸುವರೆನ್ನನತಿ ಭಯಭಕ್ತಿಯಿಂದ !
ನಗರವಾಸಿಗಳೆನ್ನ ಮೆರವಣಿಗೆ ತೆಗೆದು
ಮನ್ನಿಸುವರೆನ್ನ ನಾ ಬೇಕೆಂದು ಬಗೆದು !

ವ್ಯಕ್ತಿ:

ಮೂಢ ಚೈತನ್ಯವೇ ! ನೀನೆನಗೆ ಬೇಡ ।
ಬಲ್ಲೆನೀ ಬಲೆಯಲ್ಲಿ ಸಿಕ್ಕವನ ಪಾಡ ।
ಗಾವಿಲರ ಗುರುವಾಗಿ ಮೆರೆಯುತಿಹೆ ನೀನು;
ನಿನಗೆ ಮತ್ತೆಲ್ಲಿ ಮನ್ನಣೆ ಸಿಕ್ಕದೇನು ?

ಶಕ್ತಿ:

ಸಿರಿಯೆಂದು ಧ್ಯಾನಿಪರು ಶ್ರೀಮಂತರಿಹರು;
ಸರಸತಿಯು ಕಾಂಬುವರು ಧೀಮಂತರಿಹರು.
ನಿನ್ನೆ ಸಾಕುವು ತಾನೆ ಅರಸಾಗಲಿಲ್ಲೆ ?

ಮೊನ್ನೆ ರಸಿಯದ ಝಾರ ತಾ ಜಾರಲಿಲ್ಲೆ ?
ಇದು ಎಲ್ಲ ನಾನು ಹೂಡಿರುವಾಟವು;
ಇದು ನನ್ನ ಮಂತ್ರ ಮಾಡಿದ ಮಾಟವು !
ದೇಶದೇಶಗಳಿಗಿಹ ದಿಗ್ವಿಜಯ ನಾನು;
ರಾಜ್ಯಗಳಿಗಿಹ ಧೂಮಕೇತುವೇ ನಾನು;
ಭಾಷೆಭಾಷೆಗಳಲಿಹ ಒಳಜಗಳ ನಾನು !
ಪಿಂಡಾರಿಗಳು ಇತ್ತರೆನಗೆ ಮನ್ನಣೆಯು;
ಆಂಗ್ಲೇಯರೀವರೀಗೆನಗೆ ಕಾಣಿಕೆಯು;
ನಾನಿತ್ತೆ ರಸಿಯರಿಗೆ ಅವರ ಹೂಣಿಕೆಯು !
ಜೀವಿಸಲು ನೀ ಬಾಗು; ನನ್ನೆದುರು ಬಾಗು !
ಇಲ್ಲದಿದ್ದರೆ ಹೋಗು; ಪ್ರಾಣವನು ನೀಗು !

ವ್ಯಕ್ತಿ:

ಆರು ನೀನೆಲೆ ಶಕ್ತಿ ! ಇಂತು ಬಲುಮೆಯನು
ಮಾಡುತಿಹೆ ಪಡೆಯುವದಕೆನ್ನ ಒಲುಮೆಯನು ?
ವ್ಯಕ್ತಿ ಸಮುದಾಯವೇ ರಾಜ್ಯ, ಸಾಮ್ರಾಜ್ಯ;
ಅಂದ ಮೇಲೆಂತು ಸರಿಯಿದು ನಿನ್ನ ವ್ಯಾಜ್ಯ ?
ನಾವು ಮಾಡಿದುದನ್ನೆ ರಾಜ್ಯ ಮಾಡುವದು;
ನಾವು ಹಾಡಿದುದನ್ನೆ ದೇಶ ಹಾಡುವದು;
ದೇಶಕ್ಕೆ ಕೇಡಾದ ಅರಸನೀಡಾದ
ಮರಣದೆಳತಕ್ಕೆ ! ನಾವ್ ನಮಗೆ ಬೇಡಾದ
ಮಾರ್ಗವನು ತಿಳಿದರೂ ಏಕೆ ತುಳಿಯುವೆವು ?
ವ್ಯಕ್ತಿಸ್ವಾತಂತ್ರ್ಯವಿದೆ; ಹೇಗೆ ಅಳಿಯುವೆವು ?

ಶಕ್ತಿ:

ಹಾಗಲ್ಲ ! ಕೆಚ್ಚೆದೆಯ ಕನ್ನಡಿಗ ವೀರ !
ಅರಿತೆ ನಿಚ್ಚಳವಾಗಿ; ನೀನಹುದು ಧೀರ,
ಆದರೀ ಸ್ವಾತಂತ್ರ್ಯ ಮಾನವನಿಗಿಹುದೆ ?
ಈ ತರಹದಪರಿಮಿತ ಶಕ್ತಿ ಅವಗಿಹುದೆ ?

ನನ್ನ ಬಲೆಯಲಿ ಸಿಕ್ಕು ಬಿದ್ದ ಮಾನವನು
ನಿರುಪಾಯನಾಗಿ ಬಳಲುವನು; ಸಾಯುವನು !
ನಿತ್ಯವಿಹುದವಗೆ ಈ ಗೂಗೆಗಳ ಶಕುನ,
ಹಲ್ಲಿಗಳ ಸ್ವರವು, ಕಾಗೆಗಳ ಅಪಶಕುನ,
ಹುಚ್ಚು ಹಿಡಿಸುವ ಶಕ್ತಿ ಔಷಧದಲಿಹುದು;
ನನ್ನ ಅದ್ಭುತ ಮಂತ್ರ ತಂತ್ರಗಳಲಿಹುದು,
ನಾನು ಹೇಳಿದ ಹಾಗೆ ದೆವ್ವ ಕುಣಿಯುವದು;
ನನ್ನೆದುರು ಪೈಶಾಚಗಣವು ಮಣಿಯುವದು.
ಇವು ಎಲ್ಲಿ ಮಾನವಗೆ ರಿಪು ಸೈನ್ಯವಲ್ಲೆ ?
ನರಜನ್ಮವೆಂದಿಗೂ ನನ್ನ ಸೆರೆಯಲ್ಲೆ ?
ಮಾರೆಮ್ಮ ತರುವ ತರತರದ ಬೇನೆಗಳು
ನನ್ನವಿವೆ. ಮುಂದೆ ಬರಲಿರುವ ಸೇನೆಗಳು
ನನ್ನವೇ ! ಮತ್ತೆನ್ನ ಮೋಡಿಯ ತುತೂರಿ
ಘೋಷಿಸಲು ಆಗುವದು ನರಜನ್ಮ ಸೂರಿ !
ನನಗೆಲ್ಲ ತುತ್ತಾಗಿ, ಸಂಘಟನೆಯಾಗಿ.
ಹೋಗುವದು ನಿಮ್ಮ ಜಗವೆಲ್ಲ ಬಯಲಾಗಿ !
ಯಾವ ಕ್ಷಣದಲಿ ನಿನಗೆ ಸಾವೆಂಬುದರಿಯೆ;
ಇಂತಿರ್ದು ನೀನು ಆರ್ಭಟಿಸುವದು ಸರಿಯೆ ?
ನನ್ನ ವಾಣಿಯ ವೀಣೆ ನುಡಿಯುತಿಹುದು;
ಅದರಿಂದ ನಿನ್ನಾಟ ನಡೆಯುತಿಹುದು !
ವಶವಾಗು ನನಗಿಂದು ಇದನೆಲ್ಲ ತಿಳಿದು;
ಬಾರಯ್ಯ ! ನನ್ನೆಡೆಗೆ ಅಭಿಮಾನವಳಿದು.
ಆ ಬಳಿಕ ನಿನಗೀವೆ ಸುಖವ ಸಂಪದವ,
ತೊಳೆ ನನ್ನ ಪಾದಗಳ ತ್ಯಜಿಸುತ್ತ ಮದವ !

ವ್ಯಕ್ತಿ:

ಹಾಗಲ್ಲ ಶಕ್ತಿಯೇ ! ಇನಿತು ತೊಂದರೆಯ
ಸಹಿಸಿ ನುಸುಳಲು ಬೇಕೆ ಈ ನಿನ್ನ ಸೆರೆಯ ?

ಎಲ್ಲ ಅಣುಗಳ ಕೂಡ ಒಂದು ಅಣುವಾಗಿ
ನನ್ನ ಜೀವನವೆಲ್ಲ ನಿನ್ನ ಋಣವಾಗಿ
ನಾನಿರಲು ನಿನ್ನ ಐಸಿರಿಯೇತಕಹುದು ?
ಕುರಿಯ ಜನ್ಮಕದೆಂತು ಜೀಸರಿಯಬಹುದು ?
ಸುಖದ ಸಂಪತ್ತಿಹುದು ಘನತರ ವಿಪತ್ತು
ನಾನಿರಲು ನಿನ್ನ ಕಟ್ಟಾಣತಿಗೆ ತುತ್ತು.

**ಶಕ್ತಿ:**

ತಿಳಿಯಿತೆನಗೀಗೆಲವೊ ! ನಿನ್ನ ಒಳಸಂಚು;
ಈ ಕಲ್ಪನೆಯು ಕ್ಷಣಿಕವಿಹ ಮಿಂಚಿನಂಚು !
ನನ್ನನರಿಯದರು ದುರ್ಭಾಗ್ಯರಿರುತಿಹರು;
ನನ್ನನರಿತವರೆಲ್ಲ ಸಿರಿವಂತರಿಹರು;
ನನ್ನ ವಂಚಿಸುವವರು ಹಂಚಿ ಹೋಗುವರು !
ನಾನು ಕವಿಪುಂಗವನ ಕವಿಪಂಥ ನೋಡ;
ಈ ದುರಾಗ್ರಹವೆಂದಿಗೂ ನಿನಗೆ ಬೇಡ;
ನೀನಿನ್ನು ಅರಿತಿಲ್ಲವೆಲೇ ! ಇದರ ಪಾಡ !
ದಾರಿದ್ರ್ಯದುರಿಯಲ್ಲಿ ನಾನಿನ್ನ ಸುಡುವೆ.
ಘೋರ ಯಾತನೆಗಳಲಿ ನಿನ್ನ ಕೊಳೆಯಿಡುವೆ !
ಸರ್ವಥಾ ಬೇಡಯ್ಯೋ ! ನಂಜಿನ ಪರೀಕ್ಷೆ;
ಸಾಕು ಮಾಡಿನ್ನು, ಹಿಡಿ ಈ ನನ್ನ ದೀಕ್ಷೆ !

**ವ್ಯಕ್ತಿ:**

ಸಿರಿಯೇನು ಹಿರಿದಲ್ಲ ಹೋಗೆಲವೊ ! ಶಕ್ತಿ !
ಅರಿತೆನಿಡಿಯಾಗಿಂದು ನಿನ್ನೀ ಕುಯುಕ್ತಿ.
ಸಿರಿಯು ಇರಬಹುದು ಇಲ್ಲದೆಯು ಇರಬಹುದು;
ಸತ್ಯಜೀವನವೊಂದೆ ತಾ ನಿತ್ಯವಿಹುದು.
ಪೂರ್ಣಯೋಗದ ಗುರಿಯೆ ನಿಜವಾದ ಗುರಿಯು;
ಅದಕೆ ಬೆಂಬಲವಾಗಿ ಇಹುದಿಹದ ಸಿರಿಯು.
ಸಿರಿಯ ಸೆರೆಯಾಳಾಗಿ ನಾನಿರಲು ಒಲ್ಲೆ,
ನಿನ್ನ ಸಂಪರ್ಕವಿಲ್ಲದೆ ಇರಲು ಬಲ್ಲೆ !

**ಶಕ್ತಿ:**

ಅಲ್ಲವೋ ! ಹವೆಯಂತೆ ನಾ ಸರ್ವವ್ಯಾಪಿ !
ನನಗೆ ಶರಣಾಗದಿಹ ನರನೆಂಥ ಪಾಪಿ !
ನಿನಗಿನ್ನು ಈ ಜಗದ ಅನುಭವವ ಕೊಡುವೆ;
ಭವ್ಯ ಭವಸಾಗರದಿ ಬಿಡುವೆ ! ನಿನ್ನೀಸು
ತೋರಿಸುವೆನೆಲೆ ! ಖಂಡಖಂಡಗಳ ಚೆಲುವ,
ಪ್ರಕೃತಿ ಸೌಂದರ್ಯವನು; ಪಡೆಯುನ್ನ ಒಲವ !
ಮುನ್ನೀರಿನಾಳವನು ನೀಸು ಅರಿತಿಲ್ಲ
ಭಿನ್ನ ಕಲ್ಪನೆಗಳಲಿ ಇನ್ನು ಬೆರೆತಿಲ್ಲ.
ನಿನಗೆ ಮೆರೆವಾಂಗ್ಲದೇಶದ ಚೆಲುವ ತೋರಿ
ಅಲ್ಲಿ ಸಾರುವೆನಂತೆ ನಿನ್ನ ಜಯಭೇರಿ !
ಆಂಗ್ಲ ನುಡಿಗಿರುವ ಮಾಂಗಲ್ಯವನು ನೋಡಿ
ಬರುವಿಯಂತೆಲವೊ ! ಮಗು ! ನೀ ಕುಣಿದು ಹಾಡಿ !
ಸೃಷ್ಟಿಕರ್ತನ ಎಲ್ಲ ಮಿರುಗು ಬೆರಗು
ನೋಡಿದೊಡೆ, ಕಾಣುವದು ತಾಯ ಸೆರಗು.
ಈ ನಿನ್ನ ರೂಪದಲಿ ಮೂರು ಚಿಕ್ಕೆಗಳು;
ಮುಗಿಲ ಮೇಲ್ಮೋರ್ವವೀ ತೆರದ ರೆಕ್ಕೆಗಳು !

**ವ್ಯಕ್ತಿ:**

ಬೇಡಯ್ಯ ! ನನಗಾಂಗ್ಲ ನಾಡಿನಾ ಹಾಡು !
ಸಾಕಿಹುದು ನನಗೆ ಈ ನಮ್ಮ ತಾಯ್ನಾಡು.
ಪ್ರಕೃತಿದೇವಿಯ ಚೆಲುವು ಎಲ್ಲಕಡೆಗೊಂದೆ;
ಅದಕಂತೆ ನೀನಾದರೂ ಇಲ್ಲಿ ಬಂದೆ !
ಎಲ್ಲಿಯೂ ಅವಳ ವರಕುಸುಮಗಳ ಗಂಧ;
ಎಲ್ಲಿಯೂ ಅವಳ ಆ ಗುಣ ರೂಪದಂದ !
ನಾ ತಿರುಗಲಾರೆ ಮನೆ ಮನೆ ನಿನ್ನನರಸಿ,
ಸಾಧಕನೆ ಇರಲು ಎಲ್ಲಿರಲೇನು ಹೇಳು ?
ಬಾಧೆಯನು ತರಲಾರದವಗಾವ ಗೋಳು.

ಆಕಾಂಕ್ಷೆಗಳಿಗೇನು ಸೀಮೆಯಿದೆಯೆ ?
ಅವಕೆ ವಶವಾದವಗೆ ಶಾಂತಿಯಿದೆಯೆ ?

ಶಕ್ತಿ:

ನಕ್ಷತ್ರದಂತೆ ಹೊಳೆ ಹೊಳೆವಂಥ ಲಲನೆ,
ಅಕ್ಷಯ್ಯವಾಗಿರುವ ಮೃದುಹಾಸವದನೆ,
ಕಂಗೊಳಿಪುದವಳಿಂದ ನಿನ್ನರಮನೆ !
ಶಾಂತಿಯಹುದವಳೋರ್ವಳೀ ನಿನ್ನ ಮನಕೆ;
ಕಾಂತಿಯಹುದವಳೋರ್ವಳೀ ಈ ನಿನ್ನ ಬನಕೆ;
ನಿನ್ನ ಕಲ್ಪನೆಯೊರೆದ ನವ ಚೈತ್ರವನಕೆ !
ಆಗಸದ ಕುಂಕುಮರಿಶಿಣವಿರುವ ರವಿಯು,
ನಿಶೆಯ ನಿಶಿಯಲಿ ನಿಂತು ನಟಿಸುತಿಹ ಕವಿಯು,
ಅವಳೆಂದಿಗೂ ನಿನ್ನ ಜೀವನದ ಸವಿಯು !
ನಿನ್ನಾತುಮಕೆ ಬುದ್ಧಿ ಮನಪ್ರಾಣಗಳಿಗೆ
ಬಂದ ವೇದನೆಯುಸಿರು ನಿನ್ನ ಅರಗಿಳಿಗೆ !

ವ್ಯಕ್ತಿ:

ಬೇಡ ! ನಿನ್ನುಸಿರೆನಗೆ ಸಾವೆಲ್ಲವೊ ! ಕೇಳು,
ಇಂಥ ಹಂಬಲವೆಲ್ಲ ನನಗೆ ಬರಿಗೋಳು.
ತಾಯ್ ತಂದೆಗಳ ತೊರೆದು ಅವರೊಲವ ತ್ಯಜಿಸಿ
ಹೊಸದಾಗಿ ಒಂದು ಹೊಸ ಸೃಷ್ಟಿಯನೆ ಸೃಜಿಸಿ
ಅವಳನ್ನು ಅದರೊಡತಿಯನ್ನಾಗಿ ಮಾಡಿ
ಇರಲಾರೆ ನಿಂತಕಟ ! ನಾ ಕಾಡಿ ಬೇಡಿ !
ದೇವ ತಾನಾಗಿತ್ತ ಕುಲತಿಲೋತ್ತಮೆಯು
ಆಗಲಾರಳೆ ನನ್ನ ಐಸಿರಿಯ ರಮೆಯು ?
ನೀನು ರತುನವನಿತ್ತರೂ ಕರುಣಿಸೆನಗೆ
ಅದಕೆ ಸರಿಯಾದುಂಗುರವು ದೊರೆಯದೆನಗೆ.
ನಿನಗೆ ಶರಣೆಂದು ಇಹಸಿರಿಯನ್ನು ತಂದು
ಕಳೆದುಕೊಳಲಾರೆನೆಲೆ ! ಒಳತಿರುಳನಿಂದು !

ನನ್ನ ತೃಷೆಗನುಸರಿಸಿ ನನಗೀವನವನು;
ಉಲ್ಲಂಘಿಸುವದೆಂತು ದೇವನಾಜ್ಞೆಯನು ?

**ಶಕ್ತಿ:**

ದೇವನೆಲ್ಲಿಯು ದೇವನೆಲೆ ಮೂರ್ಖ ಕೇಳು !
ಇಂಥ ನಂಬುಗೆಯಿಂದ ನಿಮ್ಮ ಮನೆ ಹಾಳು.
ನಿನ್ನ ಭಾಗ್ಯವು ನಿನ್ನ ಕೈಯಲಿರುತಿಹುದು.
ನೀನು ಮಾಟದುದನ್ನೆ ವಿಧಿಯು ಮಾಡುವದು.
ಸಮರದಲಿ ಕಾಲ್ದೆಗೆಯಬೇಡೆಲ್ಲವೊ ! ಚೆನ್ನ !
ನಿನ್ನ ಕವಚವೆ ನಾನು; ಬಿಡೆ ನಿನ್ನ ಬೆನ್ನ !
ಮುಂದರಿವುದಕೆ ನಿನಗೆ ಕನಸುಗಳನೀವೆ,
ಸುರರ ಶಿರದಲಿ ಮೆರೆಯಲಿಚ್ಚಿಸುವ ಹೂವೆ !
ನಿಶೆಯೆ ರೆಕ್ಕೆಗಳಾಗಿ ದಿಶೆಗಳಕ್ಕರೆಯಾಗಿ
ಹಗಲೆ ಹೃದಯದಿ ಬೆಳೆಗುತಿಹ ಕರುಣೆಯಾಗಿ
ಸಾಗುವಂತಹ ಜೀವಿಗಳ ದಿವ್ಯದೇಶ
ಮಾನವನ ಪ್ರೇರಣೆಯ ವಿಮಲತೆಯ ಕೋಶ !
ಆ ನಾಡಿನಲಿ ನಿನ್ನ ಕರೆದೊಯ್ಯು ಬಿಡುವೆ;
ಅದರ ಮುಗಿಲಲಿ ತೇಲ್ವ ಕನಸುಗಳ ಕೊಡುವೆ !
ಕಿನ್ನರರ ರಂಭೆಯರ ಕಿನ್ನರಿಯರ,
ಕಿನ್ನರಿಯ ನುಡಿಸುತಿಹ ಸುಂದರಿಯರ,
ಚದುರೆಯರು ಕೊಟ್ಟ ಮದಿರೆಯ ಕುಡಿದು ಕುಣಿದು
ಕನಸುಗುದುರೆಗಳನ್ನು ಓಡಿಸುತ ದಣಿದು
ಲೀಲಾವಿಲೋಲರಿಹ ಎಳೆಯ ಬಾಲಕರ,
ಕೋಲುನವಿಲಾಟಗಳಲಿಹ ಬಾಲಕಿಯರ,
ಕುಂದದಲೆ ಕಂದದಲೆ ಮೆರೆವ ಕುಸುಮಗಳ,
ನಂದದಲೆ ಬೆಳಗುತಿಹ ಅಂದ ಜ್ಯೋತಿಗಳ
ನಾಡಿಗರಸಾಗಿ ಮಾಡುವೆ ನಿನ್ನ ಚೆನ್ನ !
ನಿನ್ನ ಕವಚವೆ ನಾನು; ಬಿಡೆ ನಿನ್ನ ಬೆನ್ನ !

ವ್ಯಕ್ತಿ:

ಸಾಕೆನಗೆ ಈ ನಿನ್ನ ಒಣರಗಳೆ ಶಕ್ತಿ !
ಅರಿತೆನಿಡಿಯಾಗಿಂದು ನಿನ್ನೀ ಕುಯುಕ್ತಿ!
ಕನಸುಗಳ ಸಿರಿಯರಸ ನಾನು, ನೀನಲ್ಲ;
ನನ್ನಾಸೆಗಳನೆಲ್ಲ ದೇವ ತಾ ಬಲ್ಲ !
ಹಂಬಲಿಸಿ ಕನಸುಗಳ ಜೀವನಕೆ ಸೋತು
ನಿನ್ನ ಹಿಂಬಾಲಿಸಲು ನೀನೊರೆವ ಮಾತು
ಸಲ್ಲದದು ! ಈ ನಾವ ನೋವನ್ನ ಸಹಿಸಿ
ಕೊಲ್ಲುತಿಹ ಆಶೆಗಳನೆಲ್ಲ ನಲೆ ದಹಿಸಿ
ನಾನು ಜೀವಿಸಲು ಕೊಡುವವನಿರುವ ದೇವ !
ಅವನಿತ್ತ ಒಂದು ಕನಸಿನ ದಿವ್ಯಭಾವ
ನೀನೀವ ಕನಸುಗಳನೆಲ್ಲ ಮೀರಿಹುದು.
ಏಕಾಂಗಿಯಾಗಿ ಸತ್ಯವನು ಸಾರಿಹುದು.
ತಾಳ್ಮೆಯಂತಹ ಶಕ್ತಿ ಇನ್ನಾವುದಿಲ್ಲ,
ನಿಜವನರಿತೆನು ಆಲಿಸೆನು ನಿನ್ನ ನೊಲ್ಲ !
ನಾನೆತ್ತಿ ಹಿಡಿಯೆ ಈ ರತ್ನವಿಹ ಹಡೆಯು
ಆಗುವದು ವಿಶ್ವ ವಿಶ್ವಕ್ಕೆಲ್ಲ ಕೊಡೆಯು !
ನನ್ನಾತ್ಮದುನ್ನತಿಯು ನನ್ನದಿಹುದು;
ಕೇಳಿನ್ನು ಶಕ್ತಿ ! ನೀ ನಾಗಬಹುದು !

× × × ×

ಕೋಪಗೊಂಡಾ ಶಕ್ತಿ ಅಣಕಿಸುವ ನಗೆಯ
ನಕ್ಕು ನಿಂತಿತು. ಇದನು ನನ್ನ ಕಡು ಹಗೆಯ
ಮಾಡಿದೆನು ಎಂದು ನಾ ಕಳವಳಿಸುವಲ್ಲಿ
ರೂಪಗೊಂಡಾ ಶಕ್ತಿ ನಿಜರೂಪ ಚೆಲ್ಲಿ
ಮಂಜಿನಂತೆಲ್ಲ ದಿಶೆಗಳನು ವ್ಯಾಪಿಸಿತು.
ಉಷೆಯು ಚಿನ್ನವ ಮುತ್ತಿ ಮತ್ತೆ ಕೋಪಿಸಿತು !
ದುಗುಡದಲಿ ನಡೆದೆ ನಾನೆನ್ನ ಮನೆಗೆ,
ಅಕಟ ! ಚಿಂತೆಯು ತಪ್ಪಲಿಲ್ಲ ಕೊನೆಗೆ !

## ಭಾಗ ೨

ಸ್ಮೃತಿ

ಇಹಳೊರ್ವ ಯುವತಿ; ನನಗಿಹ ಪ್ರಾಣ!
ಅಚ್ಚರಿಯಿಂದಲೆ ! ಅವಳ ರೂಪ ನಿರ್ಮಾಣ
ಯಾವ ದೇವನ ಕೃತಿಯೊ ಆ ದೇವನಪುದು
ಸತ್ಯ ! ನಿತ್ಯವು ನಾನವಗೆ ನಮಿಸಬಹುದು.
ಅವನಿತ್ತ ಹೂವ ಪರಿಮಳದಂತೆ ಅವನಿತ್ತ
ಒಂದು ಕನಸಿನ ದಿವ್ಯಭಾವದಂತವನಿತ್ತ
ಚಿನ್ಮಯಾನಂದಂತೆಯೆ ಇದ್ದಳವಳು.
ನಿತ್ಯವೂ ಆ ಲಲನೆ ಹೊಳೆಹೊಳೆಯುತಿಹಳು !
ಇಂಥ ಲಲನೆಯು ಕೂಡ ಕೆಳೆವಾತನಾಡಿ
ನಕ್ಕು ನಿಲಲವಳೆನ್ನ ಸಂತಸದಿ ನೋಡಿ
ನಗುತ ಕೆಲೆಯುತ ಬಂದಳೆನ್ನ ಮನೆಗೆ;
ನೆಲೆಯಿಲ್ಲದಾನಂದವಾಯಿತೆನಗೆ !
ಸಾವಿಗಿಹ ಮೇವೆಂದು ಜೀವರಂಗದಿ ಬಂದು
ಸಹಿಸಲಾರದ ನೋವುಗಳ ಸಹಿಸಿ ಬಲು ನೊಂದು
ಒಲ್ಲೆನೆಂದಳುತಳುತ ನರಜನ್ಮವೆತ್ತಿ
ಮೂರು ಮೂವತ್ತು ಕೋಟಿಯ ತೆರಿಗೆ ತೆತ್ತಿ
ಆಕ್ರೋಶಿಸುತ್ತಿರುವ ಮಾನವನ ಕೋಟಿ,—
ಎಂತು ಬರುವದು ಇದರ ಉದ್ದಳತೆ ದಾಟಿ
ಈ ಹೊನ್ನ ಹುಳಕೆ ಆ ಚಿನ್ಮಯ ಚೆಲುವು ?
ಈ ದ್ವೇಷದೂಷಣೆಗೆ ಆ ಕೃಷ್ಣನೊಲವು ?

ಇಂಥ ಸೊಬಗನು ತಳೆದ ಸುಂದರಿಯುರಿಂದಲ್ತೆ?
ಇಂಥ ಸುಕುಮಾರಿಯರ ನಿಜ ಪ್ರೇಮದಿಂದಲ್ತೆ!

ಹೀಗಿರಲು ನನ್ನ ಸ್ವರ್ಗದ ಸಿರಿಯು ಹೊಕ್ಕು
ಅಕಟ! ಬಂದಿತು ಶಕ್ತಿ! ಗಹಗಹಿಸಿ ನಕ್ಕು:
"ಎಲೆಮೂಢ! ತಿಳಿಯದಲೆ ನೀನೊಸೆದೆಯಿಂದು!
ಕಣ್ತೆರೆದು ಕುಳಿತೆ ಸಿಗಲೆಂದು ಪೂರ್ಣೇಂದು!
ಇಂಥ ಚಾರುವಿಚಾರಿಗಳೇನಕರಿಹರು;
ನಿನ್ನಂತೆಯೇ ಅವರು ಕ್ಲೇಶಪಡುತಿಹರು.
ನನಗೆ ಶರಣಾದವರ ಸಾಲ್ಗೆ ಶರಣೆಂದು
ನಿಂದುದರ ಪ್ರತಿಫಲವ ನೀ ಭೋಗಿಸಿಂದು!"
ಹೀಗೆಂದು ಒಂದು ವಿಷವಾಕ್ಯವನು ನುಡಿದು
ಹೋಯಿತೆನ್ನಯ ಪ್ರೇಮದಂಕುರವ ಕಡಿದು.
ಆ ಲಲನೆ ಯಿರುತಿಹಳು; ಇಹುದವಳ ರೂಪ;
ಆದರೀಗವಳನ್ನು ನೋಡುವದು ಪಾಪ!
ಒಮ್ಮೆ ಬಯಕೆಯು ಮನವ ಮೀರಿ ನೋಡಿದರೂ
ಅವಳ ದೈವಿಕ ರೂಪವಳಿಸಿ ಹೋಗಿಹುದು!

## ಭಾಗ ೩

ವ್ಯಕ್ತಿ:

ನನಗೆ ಪ್ರಿಯತಮವಾದ ವಸ್ತುಗಳ ತೆಗೆದು
ಮಾಣಿಕ್ಯವನು ಕೋತಿಗೊಗೆವಂತೆ ಒಗೆದು
ನನ್ನ ಸುಖವನ್ನೆಲ್ಲ ವಾಯುವಿಗೆ ತೂರಿ
ನನ್ನಂತರಂಗವನು ಸೂರ್ಯನಿಗೆ ತೋರಿ
ನಿಂತಿರುವೆ! ದಿಶೆದಿಶೆಗಳಲ್ಲಿ ನಿನ್ನ ಯಾನ!
ಮಾನವನು ನಿನ್ನುದಧಿಯಲ್ಲಿರುವ ಮೀನ!
ಎಲೆ ಶಕ್ತಿ ! ನಿನಗೆ ಭಾಗ್ಯವನಿತ್ತರಾರು ?
ರಾಜ್ಯಸೂತ್ರಗಳನ್ನು ಅರ್ಪಿಸಿದರಾರು ?

ಶಕ್ತಿ:

ನಾನರಿಯೆ; ಈ ಗೂಢವೆಲ್ಲ ನನಗರಿದು.
ಅದರ ಮರ್ಮವನೊಂದೆ ಮಾತ್ರ ನಾ ಮರೆದು
ಇರುವೆ ಮುದ್ದಾನೆ, ಇಂದ್ರನ ಲೋಕದಾನೆ !
ನನ್ನನ್ನು ಪ್ರಶ್ನಿಸುವರಾರಿಹರು ತಾನೆ ?
ನಾನು ಕಾಲೆತ್ತಿದೊಡೆ ಪದುಮಗಳು ಉಡುಗಿ,
ನಾನು ಕಣ್ಣೆತ್ತಿದೊಡೆ ತಾರೆಗಳು ನಡುಗಿ
ಜಲದಲ್ಲಿ ಆಕಾಶದಲ್ಲಿ ಅಡಗುವವು !
ಕರುಣೆ ತೋರೆಂದೆನಗೆ ಮೊರೆಯನಿಡುತಿಹುವು.
ನನ್ನೆದುರು ಮೈಮಣಿಯುದಂಥವನು ನೀನು
ಈ ನನ್ನ ಹಿರಿಯತನವನು ಮರೆತೆಯೇನು ?

ಅಲ್ಲವೋ ! ನೀನು ಮದ್ದಾನೆ; ಇದು ಸರಿಯೆ
ಆದರದಕೊರ್ವ ಮಾವುತನಿರುವದರಿಯೆ !
ಅವನ ಅಂಕುಶಕೆ ನೀ ಗೆಯ್ವ ಚೀತ್ಕಾರ
ಅವನ ದರ್ಶನದಿ ನಿನಗಾಗುವ ವಿಕಾರ
ನೀನು ತುಳಿಯುತ ಬಂದ ಯಾವ ಪದುಮಗಳೂ
ಅನುಭವಿಸವೆಂದಿಗೂ, ಯಾವ ಕುಸುಮಗಳು !
ನಿನಗೆ ಈ ಅಮಿತಶಕ್ತಿಯನಿತ್ತ ದೇವ
ನಮ್ಮೆಲ್ಲರಿಗೆ ಜನ್ಮಗಳನಿತ್ತು ಕಾವ !
ನಮ್ಮ ದೂರಸು ಕೇಳಿ ಈ ನಮ್ಮ ಜನಕ
ನಿನ್ನ ದಂಡಿಸಲಿಲ್ಲಿ ತಾ ಬರುವತನಕ
ಎಲೆ ಶಕ್ತಿ ನಿನಗೆ ಚಲ್ಲಾಟ ! ಕುಣಿದಾಡು;
ನಿನಗೆ ಮನಬಂದಂತೆಯೇ ರಾಜ್ಯಮಾಡು !
ಆದರೀ ನಿನ್ನ ಒಣ ಒಯ್ಯಾರದೊನಪು
ಅಳಿಸದಿರಲೆಂದಿಗೂ ನಾ ಕೊಡುವ ನೆನಪು.
ಮರೆಯದಿರು ನಾನೊರೆಯಲಿರುವೊಂದು ಮಾತು;
ಅದು ನಾಳೆ ನಿನ್ನ ರಾಜ್ಯದ ಧೂಮಕೇತು
ನಿರಪರಾಧಿಗಳನ್ನು ನಿಃಸತ್ತ್ವರಾಗಿ
ಮಾಡಿಟ್ಟ ಈ ನಿನ್ನ ಶವವನ್ನು, ಕಾಗಿ
ಮುಟ್ಟದೆಲೆ ! ಧಾರಣಿಯೊಳೆಲ್ಲ ನೀ ಹೋಗಿ
ಮುಗ್ಧ ಮನುಜರ ದಗ್ಧರನ್ನಾಗಿ ಮಾಡಿ
ನೀತಿವಂತರನೆಲ್ಲ ಮಿತಿಮೀರಿ ಕಾಡಿ
ಸ್ಥಾಪಿಸಿದ ನಿನ್ನ ಒಡೆತನ ಒಡಕುತನವು !
ನಿನ್ನ ಪೌರುಷ ಬರಿಯ ಬಾಯ್ಬಡಕತನವು !
ಪೃಥಿವಿಯಲಿ ಪ್ರತಿ ಜೀವ, ಪ್ರತಿ ಪ್ರಾಣದಲ್ಲಿ
ದೊರಕಬಹುದೆಲೆ ! ನಿನಗೆ ದೇವಾಂಶವಲ್ಲಿ.
ಇಂಥದೊಂದಿಡಿಯ ಸಮುದಾಯವನೆ ಸುಟ್ಟು

ಆಳಲೆಳಿಸಿದ ನಿನ್ನ ಪಾತಕಿಯ ಹುಟ್ಟು
ದೇವದೇವಗೆ ತಿಳಿಯದಂತಿರುವ ಗುಟ್ಟು!
ಎಲೆ ಶಕ್ತಿ ! ಆಳಿನ್ನು, ಸಾಮ್ರಾಜ್ಯವಾಳು;
ದೂರಿಲ್ಲ ಆಗುವದು ನಿನ್ನ ಮನೆ ಹಾಳು !

× × × ×

ಈ ನನ್ನ ನುಡಿ ಕೇಳಿ ಯಾವ ಭಾಷೆಯನು
ಮಾತನಾಡುವನಿವನ ರೂಪರೇಷೆಯನು
ನೋಡಿಕೊಳಿರೆಂದು ತನ್ನಾಳುಗಳಿಗುಸುರಿ
ಮುಂದೆ ಹೋಯಿತು ಶಕ್ತಿ ಕಂಗಳನು ಕೆದರಿ !
ಮಿತಿಯಿದೆಯೆ ಬಲಿತವರ ಕುಡುಕತನಕೆ ?
ಕೊನೆಯಿದೆಯೆ ನುರಿತವರ ಕೆಡಕುತನಕೆ ?

ಜ್ಯಾನುವರಿ ೧೯೩೦

"Imagination is the body of *Thought*
Be it for thee to find its harness out."

# ಕಲೋಪಾಸಕ

## (ಮೊದಲು ಮಾತು)

ಕಲೋಪಾಸಕನ ಜೀವಿತದ ಇತ್ಯರ್ಥವೇನೆಂಬ ಪ್ರಶ್ನೆಯು ನನ್ನನ್ನು ಅನೇಕ ವರ್ಷಗಳಿಂದ ಕೆಣಕುತ್ತಿತ್ತು. ಅವನ ಆಂತರಿಕ ಜೀವನದ ಪ್ರಗತಿಯು ಕಲಾಸೇವೆಯಿಂದ ಎಷ್ಟರಮಟ್ಟಿಗಾಗಬಹುದು? ಅಲ್ಲದೆ ಅಸಂಖ್ಯಾಕ ಕವಿಗಳು ಕೃತಿಗಳನ್ನು ರಚಿಸಿರುವಾಗ ಹೊಸ ಕವಿಯು ಬರೆಯುವ ಅಗತ್ಯವೆಲ್ಲಿದೆ? ಇವೆರಡು ನನ್ನ ಜೀವಿತದ ಕೂಟಪ್ರಶ್ನೆಗಳಾಗಿದ್ದವು.

೧೯೩೨ ನೆ ಇಸ್ವಿಯ ಡಿಸೆಂಬರ್ ೨೭ನೆಯ ತಾರೀಖಿನ ನಸುಕಿನಲ್ಲಿ ನನಗೊಂದು ಕನಸು ಬಿದ್ದಿತು. ಆ ಕನಸಿನ ದ್ವಾರವಾಗಿ ಒಂದು ಶ್ರುತಿಯೂ ಬಂದು ಮುಟ್ಟಿತು !

> "Imagination is the body of *Thought*:
> Be it for thee to find its harness out."

ಈ ಶ್ರುತಿಯಿಂದ ದೊರೆತ ಆನಂದದಲ್ಲಿ ನನ್ನ ಕೂಟಪ್ರಶ್ನೆಗಳೆರಡೂ ಮುಳುಗಿ ಹೋದವು.

"**ಆದ್ಯ ಭಾವನೆಯ** ವಾಹನವೇ ಕಲ್ಪನಾಶಕ್ತಿ; ಈ ಕಲ್ಪನಾ ಶಕ್ತಿಯೆಂಬ ಕುದುರೆಯನ್ನೇರಲೆಂದು ಪಲ್ಲಣವನ್ನು – ಶಬ್ದಸಾಮಗ್ರಿಯನ್ನು– ದೊರಕಿಸು" ಎಂದು ನನ್ನ ಸ್ನೇಹಿತರಾದ ಒಬ್ಬ ಆಂಗ್ಲ ಭಾಷಾವಿಶಾರದರು ಹೇಳಿದಂತೆ ಇದರರ್ಥವನ್ನು ಮಾಡಲು, ಕಲಾಸೇವೆಯು ಆನಂದವೂ ದೈವವೂ ಕೂಡಿಯೇ ಇರಬಹುದೆಂಬ ಶ್ರದ್ಧೆಯು ನನ್ನಲ್ಲಿ ಉತ್ಪನ್ನವಾಯಿತು. ಆದರೆ ಕವಿತೆಯನ್ನು ಬರೆಯುವಾಗ ನನ್ನನ್ನು ಪೂರ್ಣವಾಗಿ ಹಿಡಿದ

ಅರ್ಥವು ಇನ್ನೊಂದು: "ಕಲ್ಪನಾಶಕ್ತಿಯು **ಆದ್ಯಭಾವನೆಯು** ಶರೀರವು ಮಾತ್ರ. ಈ ಆದ್ಯಭಾವನೆಯೊಡನೆ ನಿನಗೆ ಬೆರೆಯಲು ಬೇಕಾಗಿದ್ದರೆ ಆ ಭಾವನೆಗೆ ಪಲ್ಲಣವಾತಿದ್ದ ಕಲ್ಪನಾಶಕ್ತಿಯೆಂಬ ಶರೀರವನ್ನು ನೀನು ಬದಿಗೆ ಸರಿಸು." ಕಲ್ಪನೆಯು ಕಾಮನ ಬಿಲ್ಲು ಸವೆದಾಗ ಮಾತ್ರ ಸತ್ಯಪ್ರಕಾಶವು ದೊರೆತೀತು;ಕಲ್ಪನೆಯನ್ನು ಸವೆಸುವದೆಂದರೆ ಅದನ್ನು ಕಲೋಪಾಸನೆಯಲ್ಲಿ ಯೋಜಿಸಲೇಬೇಕು. ಹೀಗಾಗಿ ಕಲೋಪಾಸಕನ ಜೀವನಕ್ಕೂ ಆಂತರಿಕ ಪ್ರಗತಿಯಲ್ಲಿ ಒಂದು ಸ್ಥಾನವಿದೆ. ಮಾನವನು ಅನುಭಾವಿಯಾಗುವದಕ್ಕಿಂತ ಮೊದಲು ಕಲೋಪಾಸಕನ ಸ್ಥಿತಿಯೊಳಗಿಂದ ಹಾಯ್ದು ಹೋಗಬೇಕೆಂಬ ಭಾವನೆಯು ನನಗೆ ಸಮಾಧಾನವನ್ನು ತಂದಿತು.

ಇದನ್ನೆಲ್ಲ ಕಾವ್ಯರೂಪವಾಗಿ ಹೊರಹೊಮ್ಮಿಸದೆ ಮನಸ್ಸು ಶಾಂತ ವಾಗುವ ಲಕ್ಷಣವು ಕಾಣಲಿಲ್ಲ. ಮುಂದೆ ಮೂರು ನಾಲ್ಕು ದಿವಸ ಗಳಲ್ಲಿಯೇ **'ಕಲೋಪಾಸಕ'**ವನ್ನು ಬರೆದು ಮುಗಿಸಿದೆನು. ಅಲ್ಲಿದ್ದ ಕಥೆಯು ನಾನು ಕಟ್ಟಿದ್ದಲ್ಲ; ನಾನು ಅಸಹಾಯನಾಗಿ ಬರೆಯುತ್ತ ಹೋದ ಹಾಗೆ ತಾನಾಗಿಯೆ ಕಟ್ಟಿಕೊಂಡದ್ದು. ನನಗೆ ಬಂದ ಹೊಸ ಅನಿಸಿಕೆ–ತಿಳುವಳಿಕೆಗಳ ವ್ಯಾಪ್ತಿಯ ನಿರೂಪಣೆಯು ಸಮಾಪ್ತವಾಗುವ ತನಕ ತಾನಾಗಿಯೇ ಬೆಳೆದು ಬಂದಿತು. ಕವಿತೆಯನ್ನು ಬರೆದ ಮೇಲೆ ಇಲ್ಲಿ ಕಲೋಪಾಸಕನ ನಾಲ್ಕು ಸ್ಥಿತಿಗಳು ವರ್ಣಿತವಾಗಿವೆಯೆಂದು ನನಗೆ ಹೊಳೆದಿತು.

(೧) ಕಲೋಪಾಸಕನಾಗದೆ ಅವನ ವೃತ್ತಿಯನ್ನು ಅನುಸರಿಸ ಬೇಕೆಂಬ ಹವಣಿಕೆ.

(೨) ನಿಜವಾದ ಕಲೋಪಾಸನೆ. (೩) ಮುಂದಿನ ಮಾರ್ಗದ ಶೋಧನೆ.

(೪) ಕಲೋಪಾಸಕನು ಅನುಭಾವಿಯಾಗುವದು.

ಕಲೋಪಾಸಕನು ಮೂರನೆಯ ಸ್ಥಿತಿಯಲ್ಲಿದ್ದಾಗ ಅವನು ಮಾಡುವ ಸಂಚಾರವನ್ನು ವರ್ಣಿಸುವಲ್ಲಿ ನನಗೆ ಅಕಸ್ಮಾತ್ತಾಗಿ ಶೆಲ್ಲಿ ಕವಿಯ 'ಎಲಾಸ್ಟರ್' ಎಂಬ ಕವನದ ನೆನಪಾಯಿತು. ಈ ನೆನಪಿನ ಪರಿಣಾಮವು

ನನ್ನ ಕವಿತೆಯ ಮುಂದಿನ ಭಾಗದ ರಚನೆಯ ಮೇಲೆ ಎಷ್ಟರ ಮಟ್ಟಿಗಾ ಯಿತೋ ನಾನು ಹೇಳಲಾರೆ. ಶೆಲ್ಲಿಯ ನಾಯಕನೂ ಕಲೋಪಾಸಕನಂತೆ ದೇಶಾಟನವನ್ನು ಬೆಳೆಸುವನು. ಒಂದು ನದಿಯ ದಂಡೆಯ ಮೇಲೆ ಮಲಗಿ ದಾಗ ಅವನಿಗೂ ದಿವ್ಯಾನುಭವವು ಬರುವದು. ಕಾಶ್ಮೀರದ ಅಡವಿಯಲ್ಲಿ ಒಂದು ನದಿಯ ದಂಡೆಯ ಹತ್ತಿರ ಅವನೂ ತೀರಿ ಹೋಗುವನು. ತೀರುಗು ವಾಗ ತನ್ನ ಧ್ಯೇಯದೊಡನೆ ಐಕ್ಯವಾಗುವೆನೆಂಬ ಸಂತೋಷವು ಅವನಲ್ಲಿಯೂ ಕಂಡು ಬರುವದು. ಆದರೂ ನನ್ನನ್ನು ಪ್ರೇರಿಸಿದ ತತ್ವದ ಹಾಗು ಅದನ್ನು ಒಳಗೊಂಡ ಕಥೆಯ ಹೊಳಹೇ ಬೇರೆಯೆಂದು ಓದುಗರಿಗೆ ಹೊಳೆಯದಿರಲಾರದು. ರಚನಾಕ್ರಮವು ಸಹ ಮೂಲತಃ ಭಿನ್ನವಾಗಿದೆ; ತೀರಿ ಹೋದ ಕಲೋಪಾಸಕನ ಜೀವವೆ ಈ ಕವಿತೆಯನ್ನು ಹೇಳುತ್ತಲಿದೆ.

ನಾನು ಹೇಳ ಬಯಸಿದ ಮಾತುಗಳಗೆ ಶೈಲಿಯು ಅಷ್ಟೊಂದು ಒಗ್ಗಿ ಬರಲಿಲ್ಲ. ಮೂರು ನಾಲ್ಕು ದಿನಗಳ ಭರದಲ್ಲಿ ಭಾವವು ತನಗೆ ಗೊತ್ತಿದ್ದಷ್ಟು ಶಬ್ದಗಳನ್ನು ತೂರಿಕೊಂಡಿತು. ಶೈಲಿಯಲ್ಲಿ ಕಾಣಬಹುದಾದ ಎಲ್ಲ ವೈಷಮ್ಯಗಳಿಗೆ ನಾನೇ ಹೊಣೆಗಾರನು.

ಪುಣೆ
೧೦–೧೧–೩೪

ವಿನಾಯಕ

# ಕಲೋಪಾಸಕ

## (ಒಂದು ಕಬ್ಬಿಗರ ಕೈಪಿಡಿ)

ಕೇಳಿರೈ ನನ್ನ ಬಾಳ್ವಿಕೆಯ ಐತಿಹ್ಯವನು !
ನಿಮಗೆಲ್ಲ ತಿಳಿ ಹೇಳಿ ಬಳಲುತಿಹ ಮಾನವ್ಯ–
ಕರಿದಾದ ದಾರಿಯೊಂದಿರುವ ಗೂಢವ ತಿಳಿಸಿ
ನಿಮ್ಮ ಯಮಯಾತನೆಯ ಕಳೆಯಬೇಕೆಂದಿರುವೆ.
ನಾನಿಂದು ಮುಕ್ತಜೀವಿಯೆ ಅಹುದು. ಸ್ವಾತಂತ್ರ್ಯ–
ವಿತ್ತ ಮಾಧುರ್ಯವನು ಸವಿಯುತ್ತ ದೇಹವನು
ಪುಡಿಗೊಳಿಸಿದದಟನಿಹೆ. ಮನವನ್ನು, ಬುದ್ಧಿಯನು,
ಇಂದ್ರಿಯಗಳಿರ್ಕೆಯನು ಕಳೆದುಕೊಂಡಿರುವೆನಗೆ
ಮೇರೆಯಿಲ್ಲದ ಬಾಳ ಹೊನ್ನ ಕಣಿ ಲಭಿಸಿಹುದು.
ಮುನ್ನೊಂದು ಮನೆಯಲ್ಲ ಮಿನುಗುತಿಹ ಮಿಣುಕುಹುಳು,–
ಈಗ ತಾರೆಗಳಾಚೆ ನೆಲೆಸಿರುವ ರಾಜ್ಯದಲಿ
ನಲಿಯುವೆನು; ಪದ್ಮಾದಿಗೋಲಗಳನೊಳಕೊಂಡ
ಸ್ಥಾನಬ್ರಹ್ಮದ ಸುರಭಿವಾತದೊಳು ಉಸಿರಿಡುವೆ !
ಮುನ್ನೊಮ್ಮೆ ಬೆಕ್ಕಸವು ಮಿಗುವ, ಕರ್ಕಶವಿರುವ
ಚೀರುದನಿಯಲಿ ನುಡಿವ ಪರಿಪಾಠವನು ಮರೆತು
ಇಂದು ಸುಜ್ಞಾನಿಯಾಗಿ ತಿರುಗುವೆನು. ಒಳ್ನುಡಿಯ
ಸಾರವನು ಪಡಿನುಡಿಯುತಿಹರೆಲ್ಲ ಮಾರುತರು
ಮತ್ತಾ ವಿಹಂಗಮಗಳು !

ಆಯುಸವದಿನಿತಿಲ್ಲ; ಕೋಟಲೆಯು ಕುರುಹಿಲ್ಲ;
ಧರಣಿಯೊಳು ಹಬ್ಬುಗೆಯ ಪೊಂದಿರುವ ಹೊಯ್ಕಾಲಿ-
ತನದ ಸೋಂಕಿನಿತಿಲ್ಲ; ಕೊರಗಿಲ್ಲ; ಮರವಿಲ್ಲ.
ಗಿರಿನಿರ್ಝರದ ತೆರದಿ ಸ್ವಚ್ಛಂದವಿರುತಿಹೆನು !
ಏಳು ಸುತ್ತಿನ ಕೋಟೆ ಹೆಬ್ಬಾಗಿಲವ ತೆರೆದು
ಬರವಮಾಡಿಕೊಂಡಿಹುದು; ಕೊರತೆಯಾವುದಕಿಲ್ಲ.
ಆನಂದದಲಿ ಬಯಕೆ ಸುಳಿವುದುಂಟೆ ?

ನಾನಾರು ತಿಳಿಯಬೇಕೆಂದು ಕಾತರರಾಗಿ
ದುಡುಕಬೇಡಿ ನೀವೆಲ್ಲ. ಹಿಂದೆ ರಾಮನು ಕೂರ್ತು
ಪೃಥ್ವಿಲಿಯನೊಂದೊಂದು ಹೂವಿನೊಳು ದೇಂಟಿನೊಳು
ಕಂಡಂತೆ ಭ್ರಾಂತರಾಗಿರುತ ಮೋಹಿಸಬಹುದು.
ನಾನು ಹಕಳೆಯ ದ್ಯುತಿಯು, ಹೊಸ ಕಾಲಕಿಹ ಒಸಗೆ,
ಪ್ರಾಚೀನವೆಂಬ ಪ್ರಾಚೀ ಸುಂದರಿಯ ನಗೆಯು !
ನನಗಿರುವ ಮರ್ತ್ಯರೂಪವನಳಿಸಿ ರೂಪರಾ-
ಶಿಯನು ತಳೆದಿಹೆನಿಂದು. ಇಂತೀ ಪವಾಡವನು
ಬಗೆಬಗೆಯನುಕ್ರಮಗಳನು ನೆನೆಯುತಿಹೆನು.
ನಿಮ್ಮಂತೆ ಮಾನಿಸನು ನಾನಾಗಿ ಜನಿಸಿದೆನು.
ನಿಮ್ಮಂಥ ತಂದೆ ತಾಯಿಗಳೆನ್ನ ಸಲುಹಿದರು.
ನಿಮ್ಮಂತೆ ಅಕ್ಕ-ತಂಗಿಯರೊಲವ ಬಯಸಿದೆನು.
ನಿಮ್ಮಂತೆ ಪಕ್ಕವಿಲ್ಲದ ಹಕ್ಕಿ,-ಹಾರಿದೆನು.
ಶೈಶವದ ಸ್ವರ್ಣ-ಸ್ವಪ್ನದಿ ಮುಳುಗು ಹಾಕಿದೆನು.
ತಾರುಣ್ಯದಂತರಿಕ್ಷದಿ ಮೊಗವ ತೋರಿದೆನು.
ಅಳವಿಲ್ಲದಿಹ ಪ್ರತಿಭೆ, ಪ್ರಖರವಾಗಿಹ ತೇಜ
ಬಿಡಿಯಾಗಿ ನನ್ನೆದೆಯೊಳಂಕುರಿಸಿದವು. ಗಗನ-
ಸಂಚಾರಿಯಾದೆನ್ನ ಭಾವಗಳು ದಿಕ್ಕುಗಳ
ಪಕ್ಕದಲಿ ಬೇರ್ವಿಟ್ಟು ಮರವಾಗಿ ತೋರಿದವು.
ಕವಿಗಳಿಗೆ ಕವಿಯಾಗಿ ಕವಿಶ್ರೇಷ್ಠರೆಂಬಾರು

ನೇಸಬುವರನು ನಲುಹಿ ನನ್ನ ಹಿರಿಗವಿತೆಗಳ
ಪೇರೋಲೆಯನು ಬರಯಿಸುವ ಬಯಕೆ ಮಿಗಿಲಾಯ್ತು
ಪಕ್ಷಿಸಂಕುಲದಂತೆ ಕವಿಯ ನಡೆ–ನುಡಿಯೊಂದು
ಸರಸರನೆ ಮರಮರಗಳನ್ನೇರಿ ಕುಣಿಕುಣಿದು
ಕುಕಿಲಿದೆನು. ನವಯುಗದಿ ಕವಿಯು ಮುನಿಯಹುದೆಂದು
ದೀರ್ಘಜಟೆಗಳ ಬಿಟ್ಟು ಕಾಡುಗಳ ಸುತ್ತಿರಿದು
ಪಟ್ಟಣದಿ ಮದುವಣಿಗನಂತೊಮ್ಮೆ ಮುಂಬರಿದು
ದಿಕ್ಕೆಟ್ಟು ದಿಗ್ಭ್ರಮಿಸಿ ಮುಂದುಗಾಣದೆ ಕಡೆಗೆ
ದೇಶದುಂದುಭಿಯ ನೆರೆ ಮೊಳಗಿಸಲು ಕಾವ್ಯವದು
ಜೀಗಬಹುದೆಂದೆಣಿಸಿ ನೆರೆಯಲ್ಲಿ ತೊಳಲಿದೆನು.
ನನ್ನ ಶತಕೃತ್ಯಗಳ ಕಂಡ ತಾಯ್ತಂದೆಗಳು
ಮನದಿ ಮಲ್ಲಿಳಿಗೊಂಡು ಮೂದಲಿಸಿ ಬಿರುನುಡಿದು
ಸಂಸಾರಕೆನ್ನನಣಿ ಮಾಡಿದರು. ಒರ್ವಳನು,
ಕನ್ನೆವೇಟವನರಿಯದಿಹ ಕನ್ಯೆಯನು, ತಂದು
ನನ್ನೊಡನೆ ಮದುವಣಿಯ ಮೇಲೆ ಕುಳ್ಳಿರಿಸುತ್ತ
"ಮೂರ್ಖರ ಶಿರೋಮಣಿ"ಯ ಬಿರುದುಗಾಣಿಕೆಯಿತ್ತು
ತಿಳಿಗೇಡಿಯೊಲವೆಂಬ ಬೊಗಸೆ ಸೇಸೆಯ ತೂರಿ
ಹೊಸತೊಂದು ಜನ್ಮದ ವಿವಾಹ ಕಾರ್ಯಗಳನ್ನು
ಕೊನೆಗಾಣಿಸಲು ಮುಂದೆ ನಡೆದರಾಗ !

ಒಮ್ಮೆ ಸಿಡಿಮಿಡಿಗೊಳ್ಳುವೆನು ಮನದಿ; ಮತ್ತೊಮ್ಮೆ
ಮನೆಯವಳ ಮೋರೆಯನು ನೋಡಿ ಮಿಡುಕುತಲಿಹೆನು.
"ಕಡೆಗೆ ಪೆಣ್ಮಣಿಯ ಕಣಿಯಿಂದ ಕವಿತಾರತ್ನ–
ವನು ಕಸಿದುಕೊಳಬಹುದು–" ಎಂಬಾ ಮನೋಬಲವು,
ಅಮಮ ! ನಮ್ಮವಳ ಬಣ್ಣದ ತಿಮಿಂಗಿಲತಿಮಿರ–
ದೊಳು ಮುಳುಗು ಕಂಡಿತಲೆ ! ಪ್ರೇಮಕಲಹಗಳೆನಗೆ
ರಸಿಕತೆಯ ಪಡೆಯಬೇಕೆಂಬಾಸೆ ಕಲಹಗಳ
ಮೇಲವಳಿಗಿಹ ಪ್ರೇಮದಲಿ ಲಯವ ಹೊಂದಿತದು.

ಬಡತನವ ಹೊಸ್ತಿಲದ ಹೊರಗಿಡಲು ಹೆಣಗಿದರು
ಪ್ರೀತಿಸಲವು ಕೂಸೊಂದರೊಡನೆ ಹೆಜ್ಜೆಯನಿಕ್ಕಿ
ಕಳ್ಳತನದಲಿ ಬಂದು ಮನೆಯೊಳಗೆ ವಾಸಿಸಿತು.
ಆಗ ಕಲೆ–ಕಾವ್ಯಗಳು ಪಾತಾಳಕ್ಕೈದಿದವು;
ದೂರ ಪರ್ವತಗಳಿಗೆ ಶಿಖರವಿಟ್ಟಿತು ನೋವು!

ಒರ್ವನಿದ್ದನು ಕವಿಯು, ಜ್ಞಾನವೃದ್ಧನು; ಶ್ರೇಷ್ಠ
ಕವಿತೆಗಳನೊರೆಯುವನು. ಕಾಡನಂಡಲೆಯೆಂದೆಯೆ
ಅಂಡಜನ ಸೃಷ್ಟಿಯ ರಹಸ್ಯವನು ತಿಳಿದಿರುವ
ಹೊಸಬಿಗನು, ಕಬ್ಬಿಗನು. ಜವನಪಿಗೆ ಪ್ರೌಢಮುಟ್ಟು
ಹೊಲಬುಗೆಡುತಿಹ ನನ್ನ ವೇದನೆಯ ವಿವರಿಸಲು
ಮುದುಕ ಮುಗುಳ್ನಗೆ ನಕ್ಕು ಉಸುರಿದನು: "ಎಲೆ ಕುವರ!
ಇರುವದೆಲ್ಲವ ಭೋಗಿಸುತ್ತ ವಿಹಾರಿಸಬೇಕು.
ಇದುವೆ ಯೋಗದ ಪರಮ ಸಾಧನೆಯು. ನಿನ್ನವಳ
ಕಾರಿರುಳ ರೂಪವನು ಕಂಡು ಒಲಿಯಲು ಬೇಕು.
ಮಕ್ಕಳನೆ ಮಾಣಿಕಗಳೆಂದು ಮುತ್ತಿಡಬೇಕು.
ಬಡತನವೆ ಭಾಗ್ಯವೆಂದೆಣಿಸಬೇಕಿಂತಿರಲು
ನಿನಗೆ ಲಭಿಸುವದು ದೇವನ ಕರುಣೆ. ಕವಿಹೃದಯ
ನಿನ್ನ ಸೊತ್ತಾಗುವದು." ಈ ನಿವೇದನೆಗೇಳಿ
ಖತಿಗೊಂಡು ಮರುಳಿದೆನು. ತಾಪವನು ಹಿಂಗಿಸಲು
ದಾರಿ ತೋರದೆ ಅದನು ವೇದಾಂತವೆಂದು ಪರಿ–
ಗ್ರಹಿಸುತಿಹ ಬುದ್ಧಿಮಂತಿಕೆಯನೇಳಿಸಿ, ಮುಂದೆ
ಮನೆಯಲೆನ್ನಯ ಚಿನ್ನರತಿ ಹಸಿದು ಕಂಗೆಡುವ–
ದನು ಕಂಡು ಕನಿಕರಿಸಿ, ಕರ್ಗಿ ಕಳೆಗುಂದಿರುವ
ಸತಿಯ ಮೊಗವನು ನೋಡಿ ಮನದಿ ಕಳವಳವಾಗಿ:–
"ಕಲೆಯು ಹಾಳಾಗಿರಲಿ; ಕವಿತೆಯುಸಿಮಿಸಿಗೊಂಡು
ತಾನೆ ಬಾಯ್ಬಿಡುತಿರಲಿ! ಮೊದಲು ಜೀವಂತವಹ
ಕವಿತೆಗಳ ರಕ್ಷಿಪುದು" ಎಂದು ನಲೆ ನಿರ್ಧರಿಸಿ

ನಾಪಾಡಿಗಳ ತೊರೆದು ಹುಟ್ಟಿದೂರನು ತ್ಯಜಿಸಿ
ಗುರುತಿಸವರಾರಿರದ ಪಟ್ಟಣವನೊಳಸೇರಿ
ಕೀಳುಗೆಯ್ತವನು ಸಹ ಮಾಡಿಯಾದರು ಮುಂದೆ
ಜೀವಿಸಲು ಹಾತೊರೆದು ಯತ್ನಿಸಿದೆನು.

ಪಾಲುಗಾರಳು ತನ್ನ ಅರೆಪಾಲುಗೆಲಸವನು
ಮಾಡಲೆಸಗುವಳೀಗ. ಹಸಿದ ಮಕ್ಕಳನುಣಿಸಿ
ಮಜ್ಜನಂಬುಗಿಸುತ್ತ ಮನೆವಾರ್ತೆಯನು ನೋಡಿ-
ಕೊಳುತಿಹಳು. ದಣಿದು ಬಂದೆನ್ನನಾರೋಗಣೆಯ
ನೀಡಿ ಸಂತೈಸುವಳು. ಬೆಳಗುಬೈಗಿನ ವರೆಗೆ
ಕೇರಿಕೇರಿಯ ತಿರುಗಿ ಧನಿಕರಿರವನು ಕಾದು
ಅವರ ಹೊರೆಯನು ಹೊತ್ತು ದುಡಿಮೆಯುಪಾಯವನು
ಅನ್ನೋದಕಕೆ ಬಳಸಿಕೊಳಲೆಂದು ತರುತಿರಲು
ಮೇಲ್ವಾಯ್ದು ಬರ್ಪ ಕುವರರ ನೋಡಿ, ಕಳೆದುಂಬಿ
ನಿಂತಿರುವ ನೀಟುಗಾತಿಯು ನಗೆಮೊಗವ ಕಂಡು
ಕಳೆಯುತಿದ್ದವು ನನ್ನ ಕಳವಳಗಳು!

ಬಡತನವದೆಂಥ ನೇಹಿಗನೊ! ಪಾಡುಂಗಾರ-
ನಾಗ ಬಯಸಿದ ನಾನು ರತಿಕಾರನಾಗಿರಲು
ಜೀವನದೆ ರಸವಾಯ್ತು. ಚಿಂತೆ ಮಾಣ್ದಿಹುದೆನ್ನ.
ಮೇರೆವರಿಯುವ ಚೆಲುವ ವಾರಿಧಿಯ ತೆರನಾಗಿ
ಕಾಂತಿವೆತ್ತುದು ಬಾಳು. ಬಿಸಿಲ ತಿರುಗಾಟದಲಿ
ಭುವಿಯ ಭವ್ಯತೆ ತಿರುಳುದುಂಬಿ ಬೆಸಲಾಗಿರಲು
ಪರಿಕಿಸಿದೆ ಪಾಣ್ಬರನು, ರಸಿಕರನು, ಮತ್ತರನು,
ವಿರಹಿಗಳ, ಯೋಗಿಗಳ, ಕನಸಿಗರ, ವಂಚಕರ,
ಪರರ ದುಡಿಮೆಯ ಸುಂಗಿ ಕೊಬ್ಬುವರ ಅಸ್ವರಪ-
ಯಶದಲ್ಲಿ ಮುಕ್ತಿಯನು ಕಾಂಬುವರ, ಇನ್ನೊರ್ವ
ಬರೆದ ಕವಿತೆಯನೊರೆದು ಮಾನವನು ಗಳಿಸುವರ!
ಬೆರಗುಗೊಂಡೆನು ಇವರ ಮುಲ್ಲಳಿಗಳನು ಕಂಡು.

ಆಗ ಬಾಳಿನ ಒಗಟು ಪೂರ್ತಿಯಾಯಿತು. ನನ್ನ
ಕನಸು ಕೊನರಿತು ಮತ್ತೆ. ಭೂಮಿಂತಾಯಿಯು ನಂತರು
ಅವಳನೀಪರಿ ಕ್ಲೇಶಪಡಿಸುತಿಹುದನು ತಿಳಿದು
ಅವಳ ಲಾಲನೆಯಲ್ಲಿ ಲೀನನಾಗಿಹುದೊಂದು
ಭಾಗ್ಯವೆಂದೆಣಿಸಿದೆನು. ಈ ಪರಿವ್ರಾಜನಿಂ–
ತಿರ್ಕಲದಿ ಹೋರಾಡಿ ಮೂಲಧನವನು ಮರೆವ
ಸಾಹಸಕೆ ನೆರೆ ನಕ್ಕು ನೋಂತೆನೆನ್ನಯ ಮನದಿ
ಆದರ ನಂದಾದೀಪವನು ಬೆಳಗಲೆಂದು.

ಪರಿತ್ಯಕ್ತಳಾದ ಕಲೆಯೆಂಬ ಕನ್ಯೆಯು ಮತ್ತೆ
ಬೇಟವನು ಬೆರೆಸಿದಳು. "ಇನಿತು ದಿನ ವಲ್ಲಯಿಸಿ,
ಒಲ್ಲೆನಲು ಬಳಿ ಸುಳಿವ ಬಳಿಕೆವೆಣಾ! ಎನಗುಸಿರು
ಕಜ್ಜವೇನಿಹುದಿಲ್ಲಿ?" ಎನಲು ಕ್ಷಮೆ ಬೇಡಿದಳು.
ಮೂಡವೆಟ್ಟದಿ ನಸುಕು ಅಡಿಯಿಡುವ ಮುನ್ನೆದ್ದು
ಸಿರಿವಂತರರಸಂಜೆಯಾಸನದಿ ಪವಡಿಸಿರೆ
ನಿಶ್ಶಬ್ದವಿಹ ಕೇರಿಗಳೊಳು ಧೇನಿಸುವೆನ್ನ
ಮನದ ಕನ್ನಡಿಯಲ್ಲಿ ತಮ್ಮ ಪಡಿನೆಳಲುಗಳ
ಕಂಡು ಕಳಕಳಿಸಿದವು ನೂರಾರು ಚಿತ್ರಗಳು.
ಊರ್ವಸಿಯ ನಾಚಿಸುವ ಲಲನೆಯರು ಮೋಳವಿಸಿ
ವಿದ್ಯುನ್ನಟಿಯ ತೆರದಿ ಮಾಯವಾದರು. ಮತ್ತೆ
ಕಾಳಗದ ಬಂಟರೆನೆ ಕರವಾಳಗಳ ಕೊಡಹಿ
ಮೈದೋರಿದರು. ನಂದನದ ನಂದರೆಂದೆನಲು
ಆನಮವಾದೋಜೆಯನು ತಳೆದ ಶಿಶುಗಳು ಕಣ್ಣ
ಕುಣಿಕೆಯಲಿ ಕುಣಿದೋಡಿ ನಕ್ಕು ನಲಿದಾಡಿದರು.
ಗೋವಳನು ಸಾಕಿ ಸಲುಹಿದ ಪ್ರಪಂಚವಿದೆನಲು
ಚಿಗರೆ ಸಾರಂಗಗಳು, ಧೇನುಗಳು, ನವಿಲುಗಳು,
ಇಂದ್ರನೈರಾವತವು, ವಿಧವಿಧದ ಪ್ರಾಣಿಗಳು
ಮನದೆಡೆಗೆ ಸಂಚರಿಸಿ ಮುಗಿಲೆಡೆಗೆ ಮರುಳಿದವು.

ಸರಸತಿಯು ಪರಿವಾರವಿಳಿದು ಬಂದಿರುವಾಗ
ಗೊರವಂಕ, ಪರಪುಟ್ಟ, ಅರಸುಗಿಳಿ, ಟಿವ್ವಕ್ಕಿ,
ಪಾರಿವಾಳಗಳಲ್ಲಿ ಪೊಸಪಿಸಿದುಗರೆದಿಹುವು.
ಚೆಲುವಿಗಿಹ ಸಾಮರ್ಥ್ಯಕಳವಿಲ್ಲವೆಂದೆಸಲು
ನಕ್ಷತ್ರರಂಗವನು ತೊಯ್ಯು ನಭಗಳು, ಉಷೆಯು
ಪೊನ್ನಗೆಂಪಿಸೊಳಿಲ್ಲ ನಾಂದ ದಿಗ್ವನಿತೆಯರು,
ರಜನಿಯುಂಜನದಲ್ಲಿ ತೊಯ್ದು ಬಹ ವನಭೃತರು,
ಹೂವುಗಳ, ಭೂರುಹಗಳೊಡೆಯನಿಹ ಚಂದಿರನು,
ಇನ್ನೆನಿತೊ ದೃಶ್ಯಗಳು,—ಕೊನೆಗಿವುಗಳೆಲ್ಲವನು
ಉರಿಗಣ್ಣಿನಲಿ ಏರಿ ಬಹ ಚಂಡ ಭಾಸ್ಕರನು
ನನ್ನ ಮನದೋಲಗಕೆ ಸುಣ್ಣ—ಬಣ್ಣವನಿಟ್ಟು
ಅನುಪಮಾಲಂಕಾರದಿಂದದನು ಶೃಂಗರಿಸಿ
ಬಗೆದರದು ತಮ್ಮ ಮೊಗಸಾಲೆಯೆಂದು!

ಅಂದು ಮನದುತ್ಸವಕೆ ಎಣೆಯಿಲ್ಲ. ಚಿಂತೆಯಲಿ
ಮುಳುಗಿರುವ ಜೀವವನು ಎತ್ತಿ ಹಿಡಿದಾಡಿಸಿದೆ.
ಉಷೆಯು ಸಮಯದಿ ಪೂರ್ವದಿಗ್ವಧುಲಲಟಾದಲಿ
ನಲಿ ಸನಾತನ ಬ್ರಹ್ಮ ಬರೆವ ತೇಜೋರೇಖೆ—
ಗಳನೊಂದು ಕಾಂತಪಟದಳತೆಯಲಿ ಮೂಡಿಸಲು
ನಾನಾದೆ ಕುಸುರಿಗನು, ಚಿತ್ರಕಾರನು, ಬಣ್ಣ—
ಗಳ ಶಿಲ್ಪಿ! ಒಂದೊಂದೆ ಮನದಲರಳಿಹ ನೋಟ—
ಗಳನು ತೆರೆಯಲಿ ಬರೆದು ತೂಗು ಹಾಕಿರುವದನು
ಮನೆಯ ಮುಂದಲೆಯಲಿತಿಹ ದ್ವಾರಿಕೋಕರು ನೋಡಿ
ಬೆರಳಿಟ್ಟುಕೊಂಡರೆಲೆ! ಅಳಿದಿರುವ ಸಾಮ್ರಾಜ್ಯ,
ಮರೆತು ಹೋಗಿಹ ಸ್ವರ್ಗ, ದುರ್ಗಮವಿರುವ ದುರ್ಗ,
ಆಹವಕೆ ಮಲ್ಲರಾಗಿರುವ ಬಲ್ಲರ ಯುದ್ಧ,
ಅಂದಿರುವ ಧೀರ ಸಮುದಾಯಗಳ ಗಾಂಭೀರ್ಯ,—
ಇವುಗಳಿಗೆ ಮತ್ತೆ ಸಿರಿವನೆಯಾದ ಸನ್ನಿಕರ್ಷ—

ಮೀಡಸರಿ ನೋಡುವ ಗತಾನುಗತಿಕರ ಲೋಕ-
ವೆಲ್ಲ ವಿಸ್ಮಯಗೊಳಲು, ಮತ್ತೆ ಗುಬ್ಬಿಯ ಬಾಳು,
ಗುಬ್ಬಿಮಾನವರು ಪಡೆದಿರುವ ಮಸಣದ ಬಾಳು,
ಅವರ ಕೂರ್ಮೆಗಳವರ ದುಗುಡಗಳ ಬಿಂಬಿಸಲು
ಮೋಹಿಸಿದರುಳಿದವರು. ಇನ್ನು ಕೆಲವರು ಬಂದು
ಉದಯಾಸ್ತಗಳ ರಮ್ಯತೆಯ ಬಣ್ಣನೆಯ ನೋಡಿ
ಮೆಚ್ಚಿ ತಲೆದೂಗಿದರು; ಕಳಮಗಳ ತೆನೆಗಳಿಗೆ,
ಮುಳ್ಳುಗಂಟಿಯ ಹೂವುಗಳಿಗಿರುವ ಸೌಂದರ್ಯ-
ವನು ಕಂಡು ಬಾಷ್ಪವಾರಿಯ ಸುರಿಸಿ ತೆರಳಿದರು !

ನಗರದೊಳಗಂತು ಕಲಕಲವಾಗೆ ದುಷ್ಕವಿಗ-
ಳೆಲ್ಲ ನೆರೆದರು ಚಿತ್ರಗಳ ಕುಂದನರಸಲೆನೆ.
ದೀರ್ಘನಿದ್ರಾಲಿಂಗಿತ ಕುವಿಮರ್ಶಕರೆಲ್ಲ
ಮೇಲ್ವಾಯ್ದು ಮಕ್ಷಿಕಗಳಂತೆ ಬಂದರು. ಒರ್ವ-
ನಂದನು; "ಕುರೂಪಿ ಭಾರ್ಯೆಯ ಪಕ್ಕದಲಿ ಕುಳಿತು
ಕಾಮುಕನು ಕಂಡ ನವಿಗನಸುಗಳು ನೋಡಿರಿವು
ರಂಭೆಯರ ಚಿತ್ರಗಳು !" ಜಾಣನೊರ್ವನು ನುಡಿದ:
"ಕಾಣಿರಲ ! ನೀವಿವನ ಹಂಚಿಕೆಯ. ಸೋಮಾರಿ
ತನ್ನ ನಿತ್ಯದ ದುಡಿಮೆಯುಳಿದು ಚಿತ್ರವ ಬರೆದು
ಜೀವಿಸಲು ಹವಣಿಸುವ." ಪೋರನೋರ್ವನ ಮಾತು;
"ಕೂಲಿ ಬರೆದಿಹ ಚಿತ್ರಗಳನೇಕೆ ನೋಡುವಿರಿ ?
ಕಲೆಯ ಶಾಲೆಯಲಿದಕು ಹಿರಿದಾದ ಕೆಲಸವಿದೆ."
ತೂಣಗೊಂಡಿಹನೊರ್ವ; ಸ್ವಗತಪರ ಭಾಷಣವ
ಮಾಡಿದನು: "ಜೀವಾಳವಿದೆ ಚಿತ್ರದೆಸಕದಲಿ.
ಯಾವ ಮಾರ್ಗದ ಕಲೆಯು ? ಆನೆಗವಿಗಳದಲ್ಲ.
ಕೈಲಾಸದಾಚೆಗಿನ ಜನರು ತಂದಿಹುದಲ್ಲ.
ಕ್ಷತ್ರಿಯರ ಮೈತ್ರಿಯಿದೆ, ಆದರದ ಮೀರಿಹುದು.
ಬಿಳಿಜನರ ಶೋಭೆಯಿದೆ; ಆದರನುದೇಶಿಕವು.

ಅರ್ಥಪೂರ್ಣತೆಯಿಹುದು; ವಂಗ ಭಂಗಿಯದಿಲ್ಲ.
ಇನ್ನು ಮೇಲೆನ್ನ ತಿಳುವಳಿಕೆ ಬದಲಿಸಬೇಕು.
ಕಲೆಗೊಂದು ಬೇರೆಯಭಿಧಾನವನು ಕಲ್ಪಿಸುತ
ಇದನು ಸೇರಿಸಬೇಕು.'' ಎಂದು ಕಳವಳಗೊಂಡ.

ಈ ದಿವ್ಯ ಮಾನವರ ಸಂಪಣೆಯು ಸರಿಸುತ್ತ
ವ್ಯಾಕುಲಮನಸ್ಕನಾಗಿರುವ ವೃದ್ಧನದೊರ್ವ
ಪಳಪಳನೆ ಕಣ್ಣೀರುವುಗುತಿರಲು ಅಶ್ರುಜಲ
ದಿಂದೆನ್ನ ಪಾದಗಳ ತೊಳೆದು ಅಭಿವಂದಿಸುತ:—
''ಚಿತ್ರಮಾಲೆಯನಿಂತು ದಿಶೆದಿಶೆಗೆ ಬೆಳಗಿಸುವ
ನನ್ನ ದೀಕ್ಷಾಚಾರ್ಯ ! ನಿನ್ನ ಕೃತಿಗಳ ನೋಡಿ
ಮೇರೆವರಿವುದು ಭಕ್ತಿ. ಆಜನ್ಮಹವಣಿಸಿದೆ
ಅಮರವಾದೊಂದು ಕೃತಿಯನು ಬರೆಯಬೇಕೆಂದು.
ನನಗೆ ಸಾಧಿಸಲಿಲ್ಲ. ಬಣ್ಣಗಳ ಸಮ್ಮೇಲನ–
ವೊಮ್ಮೆ ಕೈಬಿಡುತಿತ್ತು. ಒಮ್ಮೆ ಕುಂಚಕೆ ಕೇಡು–
ಗಾಲ ತಾ ಬರುತಿತ್ತು. ಕಲೆಯೆಂಬ ಲಲನೆಗುಹ
ನಗೆಮೊಗವ ನಾ ನೋಡಿದವನಲ್ಲ. ಹಿಂದಣಿಂದ
ಅವಳ ಕುಂತಳವಿಹಾರವ ದೂರ ಕಂಡಿಹೆನು.
ಆದರೆನ್ನಯ ಕುಶಲ ಕೃತಿಗಳನು ಜನರೆಲ್ಲ
ಕಾವಣದಿ ಕಾದಿಟ್ಟು ಬೆಲೆಗೆ ಕೊಳುವದ ನೋಡಿ
ಜನಸ್ತೋಮಸ್ತುತಿಗೆನ್ನಲಿಹ ಪ್ರತಿಭೆಯನು ಮಾರಿ
ಕಡೆಗೆ ಕಬ್ಬಿಗರೊಡತಿ ತೊರೆದ ಕಾಪುರುಷನೆರೆ
ಮೊರೆಯುವೆನು. ನಿನ್ನ ಕೈವಾಡವನು ತೋರೆನಗೆ,
ತರುಣನಿರೆ ಬರೆದ ದುಷ್ಕೃತಿಯ ಸ್ಮೃತಿಯಿಂದಳಿಸಿ
ಜೀವನದ ಜ್ವಾಲೆಯೆಲ್ಲವನೊಂದರಲಿ ಮುಚ್ಚಿ
ಕೃತಕೃತ್ಯನಾಗುವೆನು'' ಎಂದು ಹಲುಬಿದನು.

ಮರುಳಿ ವೃದ್ಧನ ಪದಕೆ ವಿನಯದಿ ನಮಸ್ಕರಿಸಿ
ನಾ ನುಡಿದೆ: ''ಅಲ್ಲ ! ನಾ ಕಲೆಯ ಮಾರ್ಮಿಕನಲ್ಲ !

ಅರಿತಿಲ್ಲವದರ ಮೂಲವ ನಾನು. ಚಿತ್ರಗಳು
ಮನದಿ ಸುಳಿಯಲು ಜೀವವದು ರಮಿಸಿಕೊಳಲೆಂದು
ಅವುಗಳನೆ ಬರೆದಿಹೆನು. ವಿದಿತವಿಹ ವಚನವದು
ನನಗೊರ್ವ ಕವಿವರನು ಹೇಳಿದುದು; 'ಎಲೆ ! ಕುವರ !
ಇರುವದೆಲ್ಲವ ಭೋಗಿಸುತ್ತ ಮೀರಿರಬೇಕು.
ಇದುವೆ ಯೋಗದ ಪರಮ ಸಾಧನೆಯು. ಇಂತಿರಲು
ನಿನಗೆ ಲಭಿಸುವದು ದೇವನ ಕರುಣೆ. ಕವಿಹೃದಯ
ನಿನ್ನ ಸೊತ್ತಾಗುವದು.' ನಾನಿದನು ಬಳಿಸದಯೆ
ಬಳಲಿದೆನು. ಇಷ್ಟವಿರಲಿಂತು ನೀವ್ ನಡೆಯಬಹು-
ದೆ"ನೆ ವೃದ್ಧ ಹುಟ್ಟಿದಾಸೆಗೆ ತಿಲಾಂಜಲಿಯಿತ್ತು
ಮುಂದೆ ದೈವವನರಸಲೆಂದು ಸಾಗಿದನು !

ಆಸಕ್ತನಿರಲಿಂತು ಚಿತ್ರಕಲೆಯುದ್ಯಮದಿ
ಮತ್ತೆ ಮನೆಯೊಳಗಾಯ್ತು ದುರ್ಭಿಕ್ಷೆ. ಆತ್ಮಜರ
ಕಿರಿಕಿರಿಯು ಹಿರಿದಾಯ್ತು. ಹಾಲುಬೋನವನುಂಡ
ಅವರ ರಸನೆಗೆ ನೀರುಗಂಜಿ ರುಚಿಸದೆ ಹೋಯ್ತು.
ಮನೆಯುವಳು ಚಿತ್ರಗಳ ನರೆಗಣ್ಣಿನಿಂದೊಂದು
ಸಲ ನೋಡಿ ಸುಮ್ಮನಾದಳು. ಇಂಥ ಸಮಯದೊಳು
ಪರದನೊರ್ವನು ಬಂದ ವಿಬುಧರೊಡನೊಡಗೂಡಿ.
ನಾ ಬರೆದ ಚಿತ್ರಗಳ ನೋಡಿ ಶ್ಲಾಘಿಸಿ ರಮಿಸಿ
ದೀಟವನು ನಿರ್ಣಯಿಸಿ ನನ್ನ ಕುವರರ ಕರೆದು
ದೀನಾರಗಳ ಕೊಟ್ಟು ಎರಡು ಪಟಗಳನೆತ್ತಿ
ಇವುಗಳೆಮಗಿರಲೆಂದು ಸೂಚಿಸುವದನು ಕಂಡು
ಮಂಜು ಮುಸುಕಿತು ನನ್ನ ಬುದ್ಧಿಯನು. ಮನದೊಲವು
ಮೈದಾಳ್ದ ಚಿತ್ರಗಳು ಪಣ್ಯ ವಸ್ತುಗಳೇನು ?
ಕಬ್ಬಿಗನ ಮನೆಯಹುದೆ ಪಣ್ಯವಿಕ್ರಯಶಾಲೆ ?
ಇತ್ತಲೀ ಕುವರರನು ಕರೆದು ದೀನಾರಗಳ
ಕಸಿದಿಸಿದು ಮುಟ್ಟಿಸುವದೆಂತು ? ತೊಳಲಾಡಿರುವ

ವೃದ್ಧ ಶಿಲ್ಪಿಯ ಗತಿಯ ನೆನೆಸಿ ಮೆಯ್ಯುರಿದ್ದು
ನೊಂದು ಬೆಂದೆನು ಮನದಿ. ಕೊನೆಗೆ, "ಜೀವಂತವಹ
ಚಿತ್ರಗಳ ರಕ್ಷಿಪುದು ಪರಮಧರ್ಮವು" ಎಂಬ
ಮಾತು ಮಿಂಚುತ ಬರಲು ಚಿತ್ರಗಳನೆದುರಿಟ್ಟು
ಕೊನೆನೋಟವನು ನೋಡಿ ಕಣ್ಮುಚ್ಚಿ ವಿಬುಧರೆಡೆ
ಸೂಕುತವುಗಳಿಗಿಂತು ಎರವಾದೆನು !

ಸತಿಸುತರಿಗಮದೀಗ ಬಾಳುವೆಯು ಸುಖಮಯವು
ಚಲ್ಲವರಿಯುವ ಕಲೆಯು ತನಿವಣ್ಣಗಳ ಕೊಡಲು
ಒಂದು ದೃಶ್ಯವು ಪಟದ ಮೇಲೆ ಪರ್ವಳಿಸಲಿ-
ನ್ನೊಂದು ಪರಿಧಾನದೊಳು ಮಸಗಿ ಬರುತಿರೆ, ಮನೆಗೆ
ಸಿರಿವಂತರೈದಿ ತಮ್ಮಿಚ್ಛರಿಸ ಚಿತ್ರವನು
ಕೊಂಡು ಬೀಳ್ಕೊಳುತಿದ್ದರಿತ್ತ ಮನಸಿನ ಚಪಲ-
ವೊಮ್ಮೆ ಒಗುಮಿಗುತಲಿರೆ, ಅವರ ಮನೆಮಾಡಗಳ-
ನೊಳಸೇರಿ ಚಲ್ಲವಾಡುತ, ರತ್ನಖಚಿತವಿಹ
ಕಟ್ಟಿನೊಳು ಕುಳಿತಿರುವ ನನ್ನ ಕೃತಿಗಳ ನೋಡಿ
ಆನಂದವನು ಹೊಂದಿ ಖಿನ್ನಮಾನಸನಾಗಿ
ಮತ್ತೆ ನಿಜ ಗೃಹಕೆಂದು ಮರುಳುತಿಹೆನು.

ಮುಂದೆ ಬಂತೆನಗೆ ಕೊಜಿಪ್ರಾಣವಾಗುವ ಸಮಯ.
ನೋವಿನಿಂದೀ ಸುಖಕೆ ಉಯ್ಯಾಲೆಯಾಡಿರುವ
ವಿಧಿಯ ಕೊಲ್ಲಟಗಿತ್ತಿ ತನ್ನ ಕೊಲ್ಲಣಿಗೆಯನು
ನಿಲ್ಲಿಸಿದಳೆಂದುಸಿರುವನಿತರೊಳು ಸಲಿಸಿದಳು
ಮರೆಯಲಾಗದ ತರದ ಬನ್ನಗಾಣಿಕೆಯೊಂದ !
ಪಿಡುಗು ಹಬ್ಬಿರುವಂಥ ಪಟ್ಟಣದೊಳಾವ ಮನೆ-
ಯಿಲ್ಲದರ ಹಾವಳಿಯನುಳಿದಿಹುದು; ಧನವಂತ,
ಪುತ್ರವಂತರ ಮನೆಯೊಳುರಿಶೀತವೆಲ್ಲೆಡೆಗೆ.
ನೋಡಿದತ್ತೆಲ್ಲ ಸಾಯುವ ಜನರ ದೊಂದಣಿಯು,
ಉರಿವ ಹೆಣಗಳ ರಾಶಿ. ಮೃತ್ಯುವಿನ ಪರಿವಾರ

ನೆಲೆಯೂರಿತೂರೊಳಗೆ. ಮಕ್ಕಳೊಂದಿಗಳೆನ್ನ
ಆಳ್ತಿಕಾರ್ತಿಯು ಒಣಗಿಲಂತುರಿದು ತೊಲಗಿದಳು.
ಅರಿಯಲಾರದ ದೇಶಕಿನ್ನು ಪಯಣವ ಬೆಳೆಸ–
ಲೇಕಾಂಗಿಯಿಹೆನೆಂದು ಕೊಂಡೊಯ್ದಳಾತ್ಮಜರ.
ಬಳಿಕ ಹಸುಮಕ್ಕಳನು ರಮಣಿಯನು ತಿಂದುಂಡು
ಕೊಬ್ಬಿರುವ ಘಟಸರ್ಪ,–ಮೃತ್ಯುವೆನ್ನೆಡೆ ಸುಳಿದು
ಕೊಸರಿತದು. ಪ್ರಜ್ಞೆಯಿಲ್ಲದ ನನ್ನ ಗುಡಿಗಟ್ಟಿ
ಪ್ರಳಯನೃತ್ಯವನೆಸಗತೊಡಗಿದವು ಚಿತ್ರಗಳು.
ಚಿಲ್ಲಾಣವನು ಹಿಡಿದ ನಾಯಕರು ಮುತ್ತಿದರು.
ನನ್ನ ಕಲೆಯಾಗರದೊಳನಿತು ದಿನ ಸೆರೆಸಿಕ್ಕ
ಚಲ್ಲಣದ ಜಟ್ಟಿಗಳು ನಿಂತು ಹೂಂಕರಿಸಿದರು.
ಮೃತ್ಯುರಾಗವ ಗೆಯ್ಯಲೆಸಗಿದವು ಪಕ್ಷಿಗಳು.
ಗುಮ್ಮಗಟ್ಟಿದವೆಂದು ಬರೆದ ಆಕಾಶಗಳು.
ಎಲ್ಲೆಡೆಗೆ ತನ್ನ ರೆಂಕೆಗಳನೆತ್ತಿಹ ಗಿಡುಗ
ಮರಿಪಾರಿವಾಳಗಳ ನುಂಗುತ್ತ ಕಡೆಗೆನ್ನ
ಗೂಡುಗೊಳಿಸುವರೊಂದೆ ಕಚ್ಚಿರೆ, ಬದುಕಿದೆನು.
ಏಕೆ ಬದುಕಿದೆನೇನೊ ನಾನರಿಯೆ; ಬದುಕಿದೆನು.
ಮನೆಯಲ್ಲಿ ಕಳೆಗುಂದಿ ಬಿದ್ದಿರುವ ತನಯರಾ
ಜಡದೇಹಗಳನೊಯ್ದು ಒಮ್ಮೆ ನನ್ನೊಡನಾಡಿ
ಈಗ ಕಾಡುಗಳೊಡತಿಯಾದವಳ ಬಳಿಗಿರಿಸಿ
ತನಗೆ ಪ್ರಿಯತಮರಾದವರನು ಕೊಲಬೇಕಾಗಿ
ಬಂದಿರುವ ಗಿಡಗಾರನಂತೆ ಬಲು ಕನಲಿದೆನು.
ನಗರದೊಳು ತಿರುಗಿದೆನು. ತಿಂತಿಣಿಸಿ ನಿಂತಿರುವ
ಜನರಿಲ್ಲ, ಸಿಂಗರಿಸಿದಾಟನೋಟಗಳಿಲ್ಲ.
ಜೋಲ್ವ ನಾಯ್ಗಳ ಸಂತೆ ನೆರೆಯುತಿರೆ ಮನೆಗಳಲಿ
ನರಳಾಟವಿರಿಯುತಿರೆ, ಅಗಲಿದರ ಮೂಕು ಕರೆ–
ಯೇಳುತಿರೆ,—ಈ ಭಯಂಕರ ದೃಶ್ಯವನು ಕಂಡು

ಸಹಿಸಲಾರದೆ ಮುಬ್ಬುವರಿಯುತಿರೆ ಕಣ್ಣುಗಳು,
ನಿಲ್ಲಲರಿಯದ ನಿಗ್ಗಿಡಿಯ ತೆರದಿ ತೆರಳಿದೆನು.

ಅಲ್ಲಿ ಮನೆಯಲ್ಲೇನು ನಿಃಸತ್ವ ನಿಕುರಂಬ—
ವಾದಂತೆ ಚಿತ್ರಗಳ ಗುಂಪು ಕಾಣಿಸುತಿತ್ತು.
ಮಕ್ಕಳಿನಿದನಿಯಿಲ್ಲ; ಕಾದಲಳ ನಗೆಯಿಲ್ಲ.
ಸರ್ವಜನಪರಿತ್ಯಕ್ತನಾಗಿ ವ್ಯತ್ಯಯರಹಿತ
ಪರಮಾತ್ಮ ಕುಳಿತಂತೆ ನಾನೊರ್ವ ಕುಳಿತಿಹೆನು.
ನಾನು ಕಟ್ಟಿದ ಕನಸುಗಳು ಬಿದ್ದು ಬಿದಿರಿರುವ
ಮಸಣಪಟ್ಟಿಯೊಳಂತೆ ಕುಳಿತು ಯೋಚಿಸುತಿಹೆನು.
ಶೂನ್ಯವಾಯಿತು ಜಗವು; ಶೂನ್ಯವಾಯಿತು ಮನವು;
ಅತಿ ಶೂನ್ಯವಾದವೈ ಮಾನವರ ಮಾಳ್ಕೆಗಳು!
ಒಂದುಸಲ ಬಿಮ್ಮನೆಯೆ ಜಾದೆನ್ನ ಚಿತ್ರಗಳ,
ಒಂದುಸಲ ರಣಗುಟ್ಟುತಿಹ ಮನೆಯ ಸಾಲುಗಳ,—
ಹಾಗೊಮ್ಮೆ ಹೀಗೊಮ್ಮೆ ಇಕ್ಕೆಲದಿ ನೋಡುವೆನು.

ಮುಂದೊಮ್ಮೆ, ಪಟ್ಟಣದಿ ಕೇಡುಗಾಲವು ದಾಟಿ
ಶಾಂತಿ ನೆಲೆಸಿಹುದೆಂದು ಸುಖಿಗಳಿಹ ಜನರೆಲ್ಲ
ಹೊಸತಾದ ಕೃತಿಗಳಿವೆಯೇನೆಂದು ಬೆಸಗೊಳಲು
ಬಂದರನುದಿನ ಮನೆಗೆ ವಿಬುಧರೊಜನೊಡಗೂಡಿ.
ಪಡಿನುಡಿವುದೇನವರ್ಗೆ? ನನ್ನ ಸತಿಸುತರೆಲ್ಲ
ತೊಲಗಿದರು. ನೀವ್ ತೆರಳಿರೆಂದು ಜರುನುಡಿಯುವುದೆ?
ದೇಹದಾರ್ಢ್ಯವದಿಲ್ಲ. ಬೇನೆಯಿಂದೊರಲಿಹುದ
ಕಾಣಲಾರಿರ! ಎಂದು ಬಿಸುಗುನುಡಿ ನುಡಿಯುವದೆ?
ಸಣ್ಣ ಮಾತನು ನುಡಿದೆ. "ಅಣ್ಣದಿರೆ! ಬಣ್ಣಗಳ
ಬಯಕೆಯದು ಪೂರ್ತಿಯಾಯ್ತೆನಗಿಂದು, ಸತ್ಯವಿದು.
ಈಗದರ ಹಂಬಲವೆ ನನಗಿಲ್ಲ. ಬೇರೊಂದು
ಕಾರ್ಯವಿದೆ ಸನಿಯದಲಿ. ನನ್ನ ಬಿನದವನಿಲ್ಲಿ

ಸಾಗುವಳಿಸಿದ ಕೀರ್ತಿ ಕಡೆಗು ನಿಮಗಿರಲೆಂದು
ಬೀಳ್ಕೊಂಡೆನರಿತವರನು.

ಸೊಗಸಾದ ಚಿತ್ರಗಳ ಬರೆಯುವದದಿನ್ನಾರ್ಗೆ?
ಚಿತ್ರಗಳ ಬರೆವುದಕೆ ಸೊಗಸು ಬಹುದೆಲ್ಲಿನ್ನು?
ತಡೆಯೆಲವೊ! ಮೃತ್ಯು ಬಂದೆದುರು ಬಾಯ್ದೆರೆದಾಗ
ಮರೆತೆಯಾ ಚಿತ್ರಗಳು ಅಣಕುವಾಡಿದ ಪರಿಯ?
ಇಂತು ಕೆರಳಿತು ಮನವು ನವಿಗಾರನಾಗಿರುವ
ದಿನವಳಿದು ಸೀಕರಿಗೊಳುವ ಸಮಯ ಬಂದಿತೆನೆ
ಬಣ್ಣಗಳನಲ್ಲಗಳೆಯುವ ನವಾಂಕುರವೊಂದು
ಮನದಿ ಬಿತ್ತರಿಸಿತ್ತು. ರಸದೇವಿ ಸನ್ನೊಡತಿ–
ಯೆಂದು ನಲಿದಾಡಿದೆನು. ಅವಳ ಭ್ರೂವಿಭ್ರಮವ
ಬಣ್ಣಿಸುವ ಬಾಳೆ ಜೀವಿತವೆಂದು ಸೂಗುರಿಸಿ
ಉಳಿದರ ವಿಧಾನಗಳನೆಲ್ಲ ನಗೆಯಾಡಿದೆನು.
ಈ ಮಹಾದಾಸ್ಯವತಿ ವಿಫಲವಾಗಿಹುದೆಂಬ
ತಿಳಿವು ತಂದಿರುವಿರಿತವನು ತಾಳಲಾರೆನೆಲೆ!
ನನ್ನಿಗಳ ಕೂಸಿನಂತಿರುವ ಕಲೆಯೊಡನಾಡಿ
ಸತ್ಯವನೆ ಮರೆಯುವ ಮಹಾಪಾಪವೆನ್ನದಿದು!
ಹರುಷಕಿಹ ಪರಿಸಗಲ್ಲೆಂದು ತೆಗೆದಪ್ಪಿರುವ
ಕಲೆಯು ಜೀವದ ದಾಸಿ. ಕಾಲಗತ್ತಲೆ ಬಂದು
ಕವಿವಾಗ ಕಾಯುವಳೆ? ಎದೆಯೆಲ್ಲ ಕುದಿಗೊಂಡು
ಬಿರಿವಾಗ ನಿಃಸಹಾಯಿತೆಯಾಕೆ. ಬೇರೊಂದು
ಸೌಖ್ಯ ನೆಲೆಸಿರಬೇಕು. ತೊರೆಯಿದನು. ಸಾಕಿನ್ನು
ರನ್ನದೊಟ್ಟಿಲದಾಟ; ರನ್ನದೊಪ್ಪಲ ಮೇಲೆ
ಗುರಿಯಿಲ್ಲದಲೆದಾಟ. ಭೂಮಿತಾಯಿಯ ಕಂಡು
ಮರೆಹೊಕ್ಕು ಮನಶಾಂತಿಯನು ಪಡೆಯಬೇಕೆನಲು
ಬಹು ವಿಧದಿ ಚಿಂತಿಸುತ ಜೀವಿಸಿದೆನು.

ಕರ್ರಗಿಹ ಮೆಯ್ಯ, ಕುಸಿವಂಥ ಕಾಲ್ಗಳ, ಮಂದ–

ಏಹ ನನ್ನ ಕಣ್ಣುಗಳ ನೋಡಿ ಬಲು ಮರುಗಿದೆನು.
ಮೇಲ್ವಾಯ್ದ ಬಿರುಗಾಳಿ ಸೆಳೆತವನು ಜ್ಞಾಪಿಸುತ'
ಮಾನವ್ಯದವನತಿಗೆ ತ್ವೇಷಗೊಂಡಿತು ಮನವು.
ಕಲೆಯಿರಲಿ, ಧನವಿರಲಿ, ಕೊಳುಗುಳದ ಮದವಿರಲಿ,
ವ್ಯಾಧಿಗಳ ಬಳಲಿಕೆಯು ತಪ್ಪಿಹುದೆ? ಇಂತಿರಲು
ಮಾನವನಿಗಾವ ಗೌರವವೇನು? ಮೋಸಗಳ
ತವರಿನಂತಿಹ ದುರ್ಗೆ—ಯಕ್ಷಿಣಿಯು—ಎಲ್ಲರನು
ಮುನಿಸಿನಿಂದಾಳುತಿರೆ, ಬಂದ ದುಗುಡವ ಸಹಿಸಿ
ಸುಖವಿಲ್ಲದಳಿಯುವೆವು, ನೆರವಣಿಗೆಯಿಲ್ಲದಿಹ
ಸೃಷ್ಟಿಯಿದು ಮಲಿನತೆಯ ಘನಮೂಲವಾಗಿಹುದು.
ಗಾಳಿದೇರಿನೊಳೇರಿ ಕುಳಿತು ಭುವನೈಕತೆಯ
ಕಾಣುತಿಹ ನರರೆಲ್ಲ ಮತ್ತೆ ಕೆಳಗಿಳಿಯುವರು.
ವಿಹಗಗಳು ಗೂಡುಗೊಳುವವು. ತುಂಬುಜವ್ವನದ
ರತಿಕಾರರೊಲುಮೆಗಳು ನುಚ್ಚು ನೂರಾಗುವವು.
ಲಲನೆಯರ ನುಣ್ಗದಪುಗಳ ಬೆಳಕು ಕಳೆಯುವದು.
ಕಲೆಯೊಳೆಸೆದಿರುವ ನುಡಿಜಾಣರಿಳೆಯಾಹತದಿ
ನುಡಿಗೆಟ್ಟು ಕೊಳೆಯುವರು. ಇದುವೆ ರೂಹಿನ ದಾಸ್ಯ.
ಈ ಮರ್ತ್ಯದೇಹವನು ಬಿಸುಟೊಗೆದು ನಿಂತಿರಲು
ಧರಣಿಯಾಳಿಕೆ ತಪ್ಪಿ ಸ್ವಾತಂತ್ರ್ಯ ಲಭಿಸುವದು.
ಗಾಳಿದೇರೊಂದೇಕೆ? ಗಾಳಿಯಾಗಲುಬಹುದು.
ಗಗನದಿಂದಿಳಿಯದಿಹ ಹಕ್ಕಿಯಾಗಿರಬಹುದು.
ಅಮರವಿಹ ಪ್ರೇಮದುತ್ಸವ ಕುವರರಾವಾಗಿ
ಚೆಲುವತಿಯ ಕೊನೆವರೆಗು ಕೂರ್ತು ಹೊಂದಿರಬಹುದು.
ಕುಂದುವರಳಲ್ಲ, ಸೌಸವವಾಗಿ ಪರಿಣಮಿಸಿ
ಆಕಾಶವಾಣಿಯೆನೆ ನುಡಿಯು ಚಮಕಿಸಬಹುದು.
ಅದಕೆ ರೂಹಿನ ದಾಸ್ಯವಳಿವ ಬಗೆಯೇನೆಂದೆ.
ಆನಂದ ಪ್ರೀತಿದಾಯಿನಿಯಾದ ಕಲೆಗಿರುವ

ಮೂಲ ತಿರುಳನು ತಿಳಿದು ಮೆಚ್ಚಿ ಬರೆಯುವ ರೀತಿ
ಎಲ್ಲಿ ಕಾಣ್ಬುದು, ಎಂದು ಕಾಣ್ಬುದೆಂದೆ !

ಇಷ್ಟಿಲ್ಲಿ ತರವಲ್ಲ ! ಮುಂದೆ ಬಹ ಸಾಧನೆಯ
ರಂಗಸ್ಥಲವನು ಶೋಧಿಸುವ ಕಾರ್ಯ ನಿಂತಿರುವ–
ದೆಂದು ನೆರೆಹೊರೆಯವರ ತೊರೆದು, ಸಲುಹಿದ ನಗರ–
ದಧಿದೇವತೆಯ ನಮಿಸಿ ಸೀಮೆಯನು ದಾಟಿದೆನು.
ಸತಿಸುತರೊಡನೆ ಬಾಳ್ದ ಮನೆಯ ಮೃತ್ತುವನಷ್ಟು
ಗಂಟಿನಲಿ ಕಟ್ಟಿದೆನು. ಅಗಲ್ವ ಮನಸಿಲ್ಲದಲೆ
ಪೂರ್ವಾಶ್ರಮದ ನಾಲ್ಕು ಕುರುಹುಗಳು ಬೇಕೆಂದು
ಚಿತ್ರಗಳನುಳಿಸಿದೆನು. ಈ ಸಣ್ಣ ಸಂಸಾರ–
ದೊಡನೆ ಪಯಣಿಗನಾಗಿ, ಹುಟ್ಟಿದೂರನು ತ್ಯಜಿಸಿ
ಪಟ್ಟಣಕೆ ಬಂದಂತೆ, ಪಟ್ಟಣವನೋಸರಿಸಿ
ಗೊತ್ತಿಲ್ಲದಾಸರೆಯನರಸಲೆಳಸಿದೆನು !

ಹಿಂದೊಮ್ಮೆ ಪರ್ವವೆತ್ತಿಂದು ಮಳೆಬಿಲ್ಲಿನಂತೆ
ನೆರೆ ನಾಚಿ ಕಾಣದಾಗಿರುವ ಕನ್ನಡ ನಾಡ
ಬೀಳ್ಕೊಂಡು, ಮಹರಾಷ್ಟ್ರದೇಶದುರ್ಕೆಯ ನೋಡಿ
ಅದರ ದೊಡ್ಡಿತೆಯಲವಿರಳವಾಗಿ ಬೆರೆತಿರುವ
ದಬ್ಬಾಳಿಕೆಯ ಕಂಡು ಕಳವಳಿಸಿ, ತಳಿರಂಬು–
ವಂತೆ ಚಿತ್ರವ ಸೆಳೆವ ಗುರ್ಜರಾಂಗನೆಗೊಲಿದು,
ಭಾರತಿಗೆ ತಳಿದೋರಣವ ಕಟ್ಟಲಿಹ ಹಿಂದು–
ಸುಡಿಗಾರರನು ಪ್ರೀತಿವಿಸ್ಮಯದೊಡನೆ ಕಂಡು,
ಪುಣ್ಯಪುರುಷರ ಜನ್ಮದಾತೆಯಾಗಿಹ ವಂಗ–
ದೇವಿಯಡಿಯಲಿ ನಿಂತು ಧೇನಿಸುತ ಬಾಳಿದೆನು.
ತುಂಗಭದ್ರೆಯ ಹಸಾದವ ಪಡೆದು ಕೃಷ್ಣೆಗಿಹ
ನವನೀರ ನವೆಸುತಿಹ ಯೋಗಿಗಳ ನಮಿಸಿದೆನು.
ಗೋದಾವರಿಯ ಚರಣದಾವರೆಯನಾಶ್ರಯಿಸಿ
ಧ್ಯಾನಪರರಾಗಿರುವ ಯತಿಗಳನು ಕೇಳಿದೆನು.

ಸರ್ವ್ಮದೆಯ ಬದಿಗಿರುವ ಪೊದೆನಾಡಿನಲಿ ನಿಂತ
ಸನ್ಯಾಸಿಗಳನು ಸಲುಹುವದೆನುತ ಬೇಡಿದೆನು.
ತಂಗುವನೆಯಲಿ ತಳುವ ಮುನಿವೇಷಧಾರಿಗಳ–
ನೀ ಸಮಸ್ಯೆಯ ಬಿಡಿಸಿರೆಂದು ಬಿನ್ನವಿಸಿದೆನು.
ಎಲ್ಲ ನಿಷ್ಫಲವಾಯಿತೀ ಕರ್ಣರಂಧ್ರಗಳು
ಪ್ರವಚನಗಳನು ಕೇಳಿ ಬಧಿರತೆಯನೆಯ್ದಿದರು
ಕಾಣಲಿಲ್ಲವು ಕನಸು; ಮನವೊಂದು ದೂನಿಸಿತು.
ಕೆಲವರೆಂದರು ತಮ್ಮ ದೇವನವಿದಲ್ಲೆಂದು.
ದೇಪತ್ಯಾಗೇಚ್ಛೆ ದುಷ್ಕಾಮವೆಂದರು ಕೆಲರು.
ದುರ್ಜೆವವನರಿಯದವರೆಂದರಿಲ್ಲಿಹ ಗೂಢ
ತಮ್ಮ ಬೋಧನೆಗೆ ದುರ್ವಹವೆಂದು. ತಿಳಿದವರು
ತಮ್ಮ ತಿಳುವಳಿಕೆಯೆನು ಕರುಣಿಸಲು ಬಾರದೆಯೆ
ಕೊರಗಿದರು. ಇಂತಿರಲು ಜೀವದಾಸೆಯನೊಂದ
ನಿಗ್ರಹಿಸಲರಿಯದೆಯೆ ಮನದೊಳಗೆ ಕನಲಿದೆನು.

ಮನೆಯನೊಂದನು ನೋಡಿ ಒಳಸೇರಲನುದಿನವು
ಯತ್ನಿಸುತ ಕೊನೆವರೆಗೆ ದಾರಿತೋರದೆ ಬಳಲ್ದ
ಮನುಜಸಂತೆನ್ನ ಪಾಡಾಗಿರಲು ಕಡೆಗೊಮ್ಮೆ
ಹಿಮಗಿರಿಯ ಪದಗಳಲಿ ದೇಹವರ್ಪಿಸಲೆಂದು
ಸಂಚರಿಸಿ ಗಂಗೋತ್ರಿಯಂದವನು ತಲುಪಿದೆನು.
ಧವಲಗಿರಿಯನು ನೋಡಿ ಬೆಪ್ಪುಗೊಂಡಿಹ ಮನಕೆ
ಗಂಗೋತ್ರಿಯುದಕವನು ಕಂಡು ಸಂಭ್ರಮವಾಯ್ತು.
ಆ ನೀರಿಗಿಹ ಮಿನುಗ, ತೀವ್ರತೆಯು, ತೀಕ್ಷ್ಣತೆಯು,
ಸುಪ್ರಸನ್ನತೆಯ ನೆರೆ ನೋಡಿ ಸಂತಸಗೊಂಡ
ಜೀವಕೆನಿಸಿತು; ಇಲ್ಲಿ ಜನರ ದುಮುದುಮುವಿಲ್ಲ;
ಪ್ರಕೃತಿ ತನ್ನಂತರಂಗವ ತೆರೆದು ನಿಂತಿಹಳು;
ಹಿಮರಾಜ ಯುಗಯುಗದ ಜ್ಞಾನವನು ಕೊಡಲಿಹನು;
ಅವನೊಲವು ಸಂತತದಿ ಹರಿಯುತಿದೆ. ಆರ್ಯಕುಲ–

ಪಾಚಾರ್ಯ ಪುರುಷರಿಗೆ ಜ್ಞಾನದಾನವ ಗೆಯ್ದು
ಧಾಮಾಭಿರಾಮೆಯಿವಳೆನಗೆ ಕರುಣಿಸದಿಹಳೆ ?
ಇಲ್ಲಿ ವಿಶ್ರಮಿಸುವದು ವಿಹಿತವದು, ಸತ್ಯವದು.
ಆಗ ಜೋಳಿಗೆಯಲ್ಲಿ ಕೈಯಿಕ್ಕಿ ನೋಡಿದೆನು.
ನಾಲ್ಕು ಚಿತ್ರಗಳಲ್ಲಿ. ಕಣ್ಣೀರು ಪಳಗಿದವು.
ಸರ್ವಸುಪರಿತ್ಯಾಗಕಣಿಗೊಂಡ ನನಗೇಕೆ
ಈ ಚಿತ್ರ, ಈ ಹಾಸ, ಈ ರಾಮಣೀಯಕತೆ ?
ಸೂರ್ಯನಾರಾಯಣನು ನಡುಬಾನೊಳೆಸಗಿದನು–
ಅವನ ಬಿಂಬವು ನೀರ ಮೇಲೆ ಥಳಥಳಿಸಿರಲು.
ನಾಲ್ಕು ಕೃತಿಗಳನಾಗ ನಾಲ್ಕು ಚೆನ್ನಿಗರಂತೆ
ಅಪ್ಪುಗೆಯ್ದುತ್ತು ಮುದ್ದಾಡಿ ಹೊನಲಿನಲಿರಿಸಿ:
''ತಾಯಿ ! ಗಂಗೆಯೆ ನಿನ್ನ ಸೇವೆಗೆಂದಿರಿಸಿಹೆನು
ವಾತ್ಸಲ್ಯದಣುಗರನು. ಈಡಾಡು, ಕಾಪಾಡು.
ನಿನ್ನಿಂದ ಜನಿಸಿದವು; ನಿನ್ನನ್ನೆ ಸೇರುವವು.
ಹಿಂದೆನ್ನ ಸತಿಸುತರ ಮೃತ್ಯುವಪಹರಿಸುತಿರೆ
ಮೌನವನು ತಾಳಿದೆನು ಮುಂದುಗಾಣದೆ. ಇಂದು
ಎದೆಯು ಭೇದಿಸಿದರೇನಹುದು ? ಸ್ವೀಕರಿಸಿವನು.
ನಿನ್ನ ಜೊತೆಯಲ್ಲಿರಲು ನನಗಾವ ಭಯವಿಲ್ಲ.''
ಎಂದಂಬೆಯುಡಿಯಲಂಬಿಗರ ಗುರಿಯಿಲ್ಲದಿಹ,
ಹುಸುಳರಾಟದಿ ಕೂಡಿ ತೇಲ್ವಿಡುವ, ದೋಣಿಗಳ
ತೆರದಿ ಬಿಟ್ಟೆನು. ಒಡನೆ ತಾಯಿ ಸ್ವೀಕರಿಸಿದಳು.
ಧಾವಿಸುತ ಚಿತ್ರಗಳು ನಡೆದವೆಲ್ಲಿಗೊ ಮುಂದೆ.
ಈಗೆನಗೆ ತೋಷರ್ದ ಸಂಸಾರದೆಸಳಡಗಿದವು.
ಗೊತ್ತಿಲ್ಲದೀಗಾದೆ ನಾನೂರ್ವ:–ಸನ್ಯಾಸಿ.
ಈ ತಪ್ಪಲಡಿಯನ್ನು ನನ್ನ ನೆಲೆವೀಡೆಂದು
ತಿರುಗಾಡಿ ತಂದಿರುವ ತನಿವಣ್ಣುಗಳ ತಿಂದು
ಕೊಲ್ಲೆಗಳ ನೋಡುತ್ತ ಕೊನೆಗೊಂದು ರಮ್ಯವಿಹ

ಸ್ನಾನವನು ನಿರ್ದೇಶಿಸಲ್ಲೆನಗೆ ಶಯ್ಯೆಯೆನೆ
ತಿಂಗಳಿನ ಬೆಳಕಿನಲಿ ನಗುತಲಿದ್ದಳು ತಾಯಿ.
ಅವಳ ಮಂಜುಳ ನಿನದವೆನ್ನ ಕಿವಿವೊಗುತಿತ್ತು.
ಆವಗಲೊ ನಿದ್ರಿಸಿದೆ, ಗೊತ್ತಿಲ್ಲ. ಜುಮ್ಮೆನಲು
ಮೆಯ್ನವಿರು, ನಿಮಿರಿ ನಿಂತಿರಲು ತಲೆಗೂದಲವು,
ಈ ಮೂಗು, ಈ ಕಣ್ಣು, ಈ ಬಾಯಿ ಮೋಳಮಿಸಿ
ಕಣ್ಣಾಗಿ ನಿಂತಿರಲು, ಒರ್ವ ತೇಜಃಪುಂಜ
ಯತಿವರನು ರಾಜತೇಜವನು ಬೀರುತ ಬಂದ!
ಎಳೆಗೆಂಪು, ಬಿದಿರಾಳು, ನನು ಎತ್ತರದ ನಿಲುವು;
ಬಿರಬಿರನೆ ನೇತ್ರಗಳು; ಚಂದಿರನ ಅರಳುಮೊಗ;
ಬಂದು ಬಳಿಯಲಿ ನಿಂತು ಕರ್ಣಗಳ ಹಿಡಿದೆತ್ತಿ
ನನ್ನ ಕಣ್ಬೆಳಕನೆಲ್ಲವ ತನ್ನ ಕಂಗಳಲಿ
ನೆಳೆದಿರಿಸಿ ಸಾಯುಜ್ಯಮಂತ್ರಗಳನೂದಿದನು.
ನೂರು ಮೆಲ್ಲಡಿಯಿಟ್ಟ ನೂಪುರದ ಮೆಲ್ದನಿಯಲಿ
ಕರ್ಣಗಳ ಸೇರುವಂತಾಗಿರಲು ತಡವರಿಸಿ
ಪ್ರಜ್ಞೆ ಬರುವನಿತರೊಳು ಮುಗಿಲೆಡೆಗೆ ಕೈನೀಡಿ
ದಿಶೆಗಳುಲಿವಾಲಿಸುವ ನನ್ನ ರೂಪವ ನೋಡಿ
ನನಗೆ ತುಸು ಭಯವಾಯ್ತು; ದೂರ ಪರ್ವತದಡಿಯ-
ನಾರೊ ಸೇರುವದರಿತು ಮಿತಿಯಿಲ್ಲದೋಡಿದೆನು
ಯಾರಿಲ್ಲ; ಧವಲಗಿರಿ; ಚಂದ್ರ; ಗಂಗಾಮಾತೆ;
ನಾನು; ಮತ್ತೆಲ್ಲೆಡೆಗೆ ಗುಣಿಸುತಿಹ ಮಂತ್ರಗಳು!
ತಂಗಾಳಿ ಮೆಲ್ಲಡಿಯನಿಡುತ ಸಾಗುತಲಿತ್ತು.
ಉಷೆಯ ಚಿನ್ನಗಳೆನೆಯೆ ಚಂದಿರನ ಕಾಂತಿ ತುಸು
ಕೇದಗಿಯ ಬಿಳುಪೇರಿ ಕಾಲ್ದೆಗೆಯುತಿತ್ತು; ನಸು-
ಕಿಲ್ಲಿ ನಸುಕಲ್ಲಿ ನಸುಕೆಲ್ಲೆಡೆಗೆ ನಸುಕೇರಿ
ಬೆಳ್ಳ ಬೆಳಗಾಯಿತ್ತು ಕಡೆಗೊಮ್ಮೆ! ನದಿಗೋಡಿ,
ತಾಯ ನೊರೆವಾಲ ನೆರೆ ಬಾಯ್ದೆರೆಯ ನವಿಯುತಿರೆ,

ನೀರ್ಮುತ್ತುಗಳ ನೋಡಿ ಕಣ್ಣು ಕಣ್‌ಕಣ್ ಬಿಡಲು,
ಅವಳ ನೀರ್ನಿಂತೊಮ್ಮೆ ಈ ನೊಸಲು ಬೆಸಲಾಗೆ
ಪಾಪಗಳ ಮೊಟ್ಟೆಯಾಗಿರುವ ದೇಹವನದ್ದು-
ತಾ ಪರಮ ಸಲಿಲದೊಳು, ಉದಿಸುತಿಹ ಭಾಸ್ಕರನ
ಪಾದಗಳನರ್ಘ್ಯದಿಂ ತೊಳೆದು ಪೂಜೆಯ ಗೆಯ್ದು
ಈಚೆ ದಂಡೆಗೆ ಬಂದು ಭುವಿಗೆ ನಮಿಸುತ ಕುಳಿತೆ
ಧ್ವನಿಸುತಿರಲೊಂದು ಗುರುಮಂತ್ರ ಹೃದಯಾಂತರದಿ:
"Imagination is the body of *Thought*
Be it for thee to find its harness out"

ಸೂಕ್ತವನ್ನುನ್ನಿಸುತ ಉನ್ಮೀಲಿಸುತ ಕುಳಿತೆ.
ಆಗ ಸರಿಯಿತು ಜ್ಞಾನಪಲ್ಲಟದ ತೆರೆಮರೆಯು.
"ಮೂಲಸತ್ವದ ತಿಳಿವು ಎಲ್ಲದರ ಮೂಲವದು.
ಅದರ ವಾಹನವಾದ ಕಲ್ಪನೆಯನಣಿಗೊಳಿಸು!"
ಎಂಬ ಮಾತನು ವಿರಾರಲಾರದೆಯೆ ನುಡಿಯುತಿಹೆ
ನಿಮಗಿದರ ಗೂಢವನು, ದೇಹವನು ತ್ಯಜಿಸಿದರು!
ಮತ್ತೆ ಧ್ಯಾನವ ಬೆಳೆಸಲಾ ಮಂತ್ರವನು ಕುರಿತು
ಹೊಚ್ಚ ಹೊಸ ಮರಿಗಳಂತಿರುವೆನ್ನ ಭಾವಗಳು
ರೆಕ್ಕೆಗೊಳುತೆಲ್ಲೆಡೆಗೆ ತಾವೆ ಸಂಚರಿಸಿದವು.
ಕಲೆಯನತಿ ದೂಷಿಸಿದೆ; ಕಲೆಯನರಿಯುದಲಿಂತು
ಮೂಲವನು ತಿಳಿಯಬಹುದೇನೆಂದು ಮರುಗಿದೆನು.
ಅಳವಿಲ್ಲದಿಹ ಚೆಲುವಿನೇಕಮೇವತೆಯದರ
ಒಹುವಿಧತೆಗಿಹ ಪೆಂಪು-ಸೊಂಪುಗಳ ಕೂರವಲೆ
ಕಾಣುವದು ದುಃಸಾಧ್ಯವೆಂದೆನಿಸಿ ರಸದೇವಿ-
ಯನಃ ಚಿತ್ತದೊಳು ನಮಿಸಿ ಅವಳ ಕ್ಷಮೆ ಬೇಡಿದೆನು.
ಕಾಣ್ಕೆಯನು ತುಂಬಿ ನೆರೆಯಂತೆ ಬಂದಿಹ ಕಣಸು-
ಗಳ ಕೂಟವನು ಕರೆದು ಮನ್ನಿಸಿದೆನರ್ತಿಯಲಿ.
ಚಲುವತಿಯ ರೂಹುಗಳಿಗಿರುವ ಚಂದವ ತಿಳಿದು

ಅದನೊಂದಿ ಬಾಳ್ದ ಸಮರಸದ ಬಾಳ್ಕೆಯು,—ಅದನು
ಕಲೆಯಾಗಿ ಜೀವಂತಗೊಳಿಸಿ ನಿಲಿಸಿದ ಕೂರ್ವೆ
ಸುಮುಹೂರ್ತದೊಳು ಫಲಿಸಿ ಮೂಲಸತ್ಯವು ತಳೆದ
ದೇಹವಾವರಣವದು—ಮಾಯೆ, ಕಲ್ಪನೆಯೆಂಬ
ರಸ್ನವಲ್ಲಣ—ಹೋಗಿ, ಆಕೃತಿಯನಡಿಗಿಸಿಹ
ಚೆಲುವೆಂಬ ಸತ್ಯವನು ಬೆರೆವ ಸಂತಸವುಕ್ಕಿ,
ದೇಹದೀ ಸೆರೆ ಕಳೆವುದೆಂಬ ನಂಬಿಗೆಯೂರಿ
ಕಡೆಗೊಮ್ಮೆ ಶಾಂತಮಾನಸನಾದೆ ಭುವನದೊಳು.

ತಪ್ಪಲಡಿ ಶಯ್ಯೆಯದು; ಗಂಗೆ ಸಲಹುವ ಮಾತೆ;
ಈ ರನ್ನದೊಟ್ಟಿಲಕೆ ಮುಗಿಲೆ ಮುತ್ತಿನ ಚಂದು!
ಸಿಕ್ಕಿವಿನಿದಿನಸುಗಳ ಬಿದ್ದಣವು ಹಿರಿದಾಯ್ತು.
ಗಿರಿಯಡಿಗೆ, ಮುಗಿಲಡಿಗೆ, ಮನದಡಿಗೆ ಚಿರಶಾಂತಿ.
ಸುತ್ತಲಿಹ ಚೆಲುವೆಲ್ಲ ಚೆಲುವತಿಯ ತಲೆದುಡಿಗೆ,
ಅಲ್ಲಿ ಸಂಚಲಿಸುತಿಹ ಕಡ್ಡಿಯಾನೊಂದೆಂದೆ!
ಹೊಂಗಿರಿಯ ಮೇಲೆ ತೇಜಗಳ ಜೋಗಿರಲ್ಲಿ
ಮಳೆಬಿಲ್ಲ ವ್ಯೂಹಗಳಿಗೊಂದು ಬಣ್ಣದ ಮಿಣುಕು
ನಾನೆಂದೆ. ಇನಿತು ದಿನ ಹೇಗೆ ಮರೆತೆನೊ ಕಾಣೆ!
ಭೃಂಗಕೇಲಿಯಲಿ ಸುರಕನ್ಯೆಯರ ಸುಣ್ಜಾರವ,
ತಳಿರ್ದೊಂಗಲಲ್ಲಿ ಮುಗಿಲ್ಗೆಂಪ ಶರಹುವನೊಂದು,
ಬಯಲಿನೊಳು ಸಿರಿದಾಣವನು, ತಾಣದಲಿ ಬಯಲ–
ನನುಭವಿಸಿದಾಶ್ಚರ್ಯತೆಯು ಮಿಗಿಲಾಯ್ತು. ಹೂವುಗಳ
ಮುತ್ತಿಟ್ಟೆ. ನೀರ ತನಿದಂಪಿನಲಿ ಮನವಾರೆ
ಮುಳುಗಿದೆನು. ತಣ್ಬಿಸಿಲ ತನಿವೇಟವನು ತಳೆದು
ಸಿಮಿರಿದೆನು. ವಿಶ್ವವನು ತುಂಬಿರುವ **ಸತ್ಯವೇ!**
ಎಂದು ಕುಣಿದಾಡಿದೆನು, ಕುಲಿಕಿದೆನು, ಗುಡುಗಿದೆನು!

ಸತ್ಯವದು ಕಣ್ಣೊಳಗೆ ಸ್ಥಿರವಾಗಿ ನೆಲಿಸುತಿರೆ
ಬಂದೆ ಬೆಳಕೆಲ್ಲೆಡೆಗೆ ಅರಳಿ ನಿಲ್ಲುತ ಮುಗಿಲಿ—

ನೊಳಗಿಂದ ಸುರಿದಿತ್ತು; ನೀರಿನೆದೆಯನು ತೆರೆದು
ಸರಸವಾಡುತಲಿತ್ತು; ಗಿರಿಗಳನು ಹೊಂದಿತ್ತು;
ಹುಲ್ಲು, ಮರ, ಹೂವುಗಳ ನಿರತೆಯಲಿ ತೋರಿತ್ತು.
ಹೊಟ್ಟೆ;–ಹಸಿವೆನಲಿಲ್ಲ; ಗಾಳಿಯನು ಸೇವಿಸಿತು.
ಅವಯವಗಳಲುಗಾಡಲಿಲ್ಲ; ಕುಳಿತಿರುವಲ್ಲಿ
ಕೂರ್ತದನು ಕೊಳುತಿಹವು; ಉಸಿರು ಮೆಲ್ಲುಲಿದಿತ್ತು.
ನೀರವತೆ, ಆನಂದ, ಅರ್ಥಪೂರ್ಣತೆ, ಬೆಳಕು.

ಪೂರ್ಣಯೋಗವದಿಂತು ಬಂದು ಮೈಮರೆಸಿರಲು
ಯಾವ ದಿನವದು ಕಾಣೆ, ಒಮ್ಮೆ ತಾವೆಯೆ ಕಣ್ಣು
ನೀಟಾಗಿ ತೆರೆದಿಹವು; ಸುತ್ತು ನೆರೆ ನೋಡಿದೆನು.
ನಡುಗತ್ತಲಾಗಿತ್ತು; ಚಿಕ್ಕೆಗಳ ತಿಂತಿಣಿಯು
ಬಾಂದಳವ ಕಿಕ್ಕಿರಿದು ನೆರೆದಿತ್ತು. ಹಿಮಜಾತೆ
ಧ್ಯಾನಿಸುತ ಸಾಗಿಹಳು; ಅವಳನಾಗಸಗಂಗೆ
ಕರೆಯಲಸುವಾಗಿಹಳು. ಎಲ್ಲಿಹೆನೊ ನೆನಪಿಲ್ಲ,
ಕಡೆಗೊಮ್ಮೆ ಮೌನಗೊಂಡಿರುವ ತಾರಾವಲಯ–
ವನ್ನೊಡೆದು ಧಾವಿಸುತ ಬಂತೊಂದು ದಿವ್ಯಪ್ರಭೆ.
ಎಲ್ಲ ಬೆಳಕಿಗೆ, ಎಲ್ಲ ಇರುವಿಕೆಗೆ, ಗರುವಿಕೆಗೆ
ಮೂಲಕಾರಣವಾದ ಹಿರಿ ಬೆಳಕು ನಿರಿಮುಗಿಲಿ–
ನಂತೆ ಇಳಿಯುತ ಬಂತು. ಅದರೋಜೆಗಳಿಸಿದವು
ತಾರೆಗಳು. ಬಾನಿಳೆಯು ಗಂಗೆಯುರು ಸಂಗಮಿಸಿ
ಶೋಭಿಸಿದರದರ ನಗೆಯಾಗುತ್ತ. ಬೇರೊಂದ–
ದಾವುದುಳಿದಿರಲಿಲ್ಲ: ನಾನು, ನೀಳ್ಬೆಳಕೊಂದು.
ಆ ಜೀವಚುಂಬಕವ ಕಂಡೊಡನೆ ಸಂಭ್ರಮಿಸಿ
ಮನವೆಂಬ ರನ್ನವಟ್ಟಿಗೆಯೊಡೆದು ಮೃತ್ತಿಕೆಯ
ಮೇಲ್ಮಾಡವನು ತೆರೆದು ಕಿಡಿಯೊಂದು ನೆಗೆದಂತೆ
ಅಂಗುಲಿಯ ನಖದುದ್ದ ಕುಡಿದೀಪ ಮುಸುಳ್ದಂತೆ
ಮುಗಿದು ಹೋದೆನು ಲೀನನಾಗಿ ತನಿವೆಳಕಿನೊಳು.

ದೇಹವದು ನೆಲಕುರಳಿ ನದಿಯ ನೀರೊಳು ಮುಳುಗಿ
ಕಣಕಣದಿ ಪುಣ್ಯವನು ಹೊಂದಿತ್ತು. ಮನ, ಬುದ್ಧಿ,
ಇಂದ್ರಿಯಗಳಿಂದಿಗೋ ಭೋಗಿಸಿದ್ದುವು ಲಯವ.

ಇಂತು ಕಥೆ ಮುಗಿದಿಹುದು. ಎನ್ನನಾಲಿಸಲಿನ್ನು
ಮನವಿರಲು ಮರೆಹೋಗುವದಾ ವಿಹಗಗಳ ದನಿಯು,
ಇನಿಯರಿನಿವಾತುಗಳ, ಸಂಜೆಮುಂಜಾವುಗಳ,
ತನಿವಣ್ಣದೈಸಿರಿಯು, ಎದೆಯೊಲವ, ಈ ಧರೆಯು !

ಡಿಸೆಂಬರ ೧೯೩೨

# ತಾಯವ್ವನ ಸಮಾಧಿ

## (ಮೊದಲುಮಾತು)

ಈ ಕವಿತೆಯ ಮೂಲವು ನನ್ನ ಪತ್ನಿಯ ಒಂದು ಸ್ವಪ್ನದಲ್ಲಿದೆ. ವಿಧ ವಿಧವಾಗಿ ಪಲ್ಲಟಗೊಂಡಿದ್ದರೂ ಆ ಸ್ವಪ್ನವಸ್ತುವು ಎರಡನೆಯ ಹಾಗು ಮೂರನೆಯ ಭಾಗಗಳಲ್ಲಿ ವ್ಯಕ್ತವಾಗಿದೆ. ಚಿತ್ರವನ್ನು ಪೂರ್ತಿಗೊಳಿಸಲೆಂದು ಉಳಿದ ಭಾಗಗಳನ್ನು ನಾನು ಹೆಣೆದುಕೊಂಡೆನು.

ನನ್ನ ಮನಸ್ಸನ್ನು ಆಕರ್ಷಿಸಿದುದೆಂದರೆ "ಮರದ ಒಳಮೈಯ್ಯಿಂದ ಬಂದ ಆ ಊರವವೇ" ಸರಿ. ಭಾವನೆಯಲ್ಲಿ–ವಿಶ್ವಾಸದಲ್ಲಿ – ಶಕ್ತಿಯಿದ್ದುದಾದರೆ ಅದು ಕೊನೆಗೊಮ್ಮೆ ಸಮಾಧಾನವನ್ನು ಹೊಂದಲೇಬೇಕು. ಯಾವ ಭಾವನೆಯೇ ಇರಲಿ, ಅದು ಬಲವಂತವಾಗಬೇಕಾದರೆ ಅದರ ಬುಡದಲ್ಲಿ ದೃಢವಾದ ವಿಶ್ವಾಸಬೇಕು. ತಾಯವ್ವನ ವಾತ್ಸಲ್ಯದಲ್ಲಿ ನಾನು ಕಾಣಬಯಸಿದ್ದು ಈ ತೆರನಾದ ವಿಶ್ವಾಸ; ಅದರ ಫಲವಾಗಿ ಬರುವ ದರ್ಶನ.

ಆದರೆ ಈ ಸನ್ನಿವೇಶವನ್ನು ಚಿತ್ರಿಸಬೇಕೆಂದು ವಿಚಾರಿಸಿದಾಗ ಅದಕ್ಕೊಂದು ಕಥೆಯ ಕುಂದಣವು ಅವಶ್ಯವೆನಿಸಿತು. ಕೂಸು ಗಿಳಿಯಾಗಿದ್ದ ಕಥೆ, ಇಲ್ಲವೆ ಇನ್ನೊಂದು ರೂಪವಿಶೇಷವನ್ನು ಹೊಂದಿದ ಕಥೆ, ಇವೇ ಮುಂತಾದ ಕಥೆಗಳನ್ನು ಕೇಳಿದ್ದ ನನಗೆ ಇದನ್ನೊಂದು ಜಾನಪದ ಕಥೆಯನ್ನಾಗಿ ಮಾಡಬಹುದೆಂದು ಹೊಳೆಯಿತು. ಇಂತು ಮೊದಲು ಮಾಡಿ ನಾನು ತಾಯವ್ವನ ಕಥೆಯನ್ನು ರಚಿಸಲು ಪ್ರಾರಂಭಿಸಿದೆನು. ಆದರೆ 'ಮರದ ಒಳಮೈಯ್ಯಿಂದ ಬಂದ ಆ ಊರವ'ಕ್ಕೆ ಮೊದಲಿನಿಂದ ಮೋಹಿಸಿದ್ದ ನನ್ನ ಕಲ್ಪನಾಶಕ್ತಿಯು ಮೊದಲನೆಯ ಭಾಗದಲ್ಲಿ ಎಚ್ಚರಗೊಂಡಂತೆ ತೋರ

ಲಿಲ್ಲ. ಕವಿತೆಯು ನಿಜವಾಗಿ ಮೂರನೆಯ ಭಾಗದಿಂದ ಸುರುವಾಗಿರುವ
ದೆಂದೇ ನನ್ನ ಭಾವನೆ. ಮೊದಲಿನ ಪದ್ಯಗಳನ್ನು ಈ ಕಾವ್ಯದ ಹಿನ್ನೆಳಲೆಂದು
(Back ground) ಮಾತ್ರ ಉಪಯೋಗಿಸಬಹುದು.

ಮೂರನೆಯ ಭಾಗವನ್ನು ಬರೆದಾಗ ನನ್ನನ್ನು ಸೆಳೆದ ಭಾವನೆಯಿಂದ
ಬಿಡುಗಡೆ ಹೊಂದಿದೆನು. ಆದರೆ ತಾಯವ್ವನ ಕಥೆಯನ್ನು ಮುಗಿಸುವದೂ
ನನ್ನ ಕಲ್ಪನೆಯು ಪಡೆಯಲೆಳಸಿದ ಸಮಗ್ರತೆಗೆ ಅವಶ್ಯವಾದ ಮಾತು.
ಅವಳ ಭಾವನೆಯು ಈ ರೀತಿಯಾಗಿ ಫಲದಾಯಕವಾದಾಗ ಅವಳ ಜೀವ
ನವೂ ವಿಶೇಷವಾಗಿ ಮಾರ್ಪಾಟು ಹೊಂದಿರಬಹುದೆಂದು ನಂಬಿದ ನನ್ನ
ಕಲ್ಪನೆಯು ಆ ಬಾಳುವೆಯ ಹೊಸತನವನ್ನು ನಾಲ್ಕನೆಯ ಭಾಗದಲ್ಲಿ
ಯಥಾವತ್ತಾಗಿ ಚಿತ್ರಿಸಲು ಹವಣಿಸಿತು. ಒಂದು ಅದ್ಭುತವನ್ನು ಕಂಡು
ಆ ಅನುಭವದೊಂದಿಗೆ ಬೆರೆತ ಜೀವನದ ಸಾಮಾನ್ಯತೆಯು ತುಸುವಾದರೂ
ಸರಿದೇ ಸರಿಯುವದು. ಕೊನೆಯ ಭಾಗವು ಒಂದು ಉತ್ಪ್ರೇಕ್ಷೆ, ಒಂದು
ಅಲಂಕಾರ.

ಪುಣೆ
೧೦–೧೧–೩೪

ವಿನಾಯಕ

# ತಾಯುಮ್ಮನ ಸಮಾಧಿ

೧

ಒಂದೂರು; ಆ ಊರಿ-
ನೊಂದು ಮನೆಯೊಳಗಿತ್ತು
ಗಂಡ ಹೆಂಡತಿಯೊಂದು ಸುಖದ ಜೋಡು.

ಒಂದು ದಿನ ಅವರಿಗಿರು-
ವೊಂದೆ ಮಗು ತೀರಿತ್ತು.
ಏಳರೊಳಗಿರಲಿಲ್ಲ, ಬಂತು ಕೇಡು.

ಎದ್ದು ಉನ್ಮಾದಿನಿಯು
ಮುದ್ದು ಕುವರನ ಶವವ
ಎತ್ತಿಕೊಂಡೊಯ್ದಾಳೊ ಬನದ ಬಳಿಗೆ !

ಎಲ್ಲ ಹರಹಿದ ತಲೆಯು;
ಎಲ್ಲೆಯರಿಯದ ಸೆರಗು;
ಮಲ್ಲಿಗೆಯ ಮೆಯ್ಯು ಬಿರಿತಿಹುದು ಚಳಿಗೆ !

“ಜಾಜಿಮಲ್ಲಿಗೆಯಂಥ
ರಾಜಸುತನನು ಪಡೆದೆ.
ಬೀಜವಂಕುರಿಸದಲೆ ಅಳಿವುದುಂಟೆ ?

ಪ್ರಜೆಗಳನು ಕೊಲುವಂಥ
ಸೃಜ ನಿಯಮಗಳನ್ನು
ಸೃಜಿಸುತಿರೆ ದೇವನಲಿ ನ್ಯಾಯವುಂಟೆ ?”

"ನೆರೆದವರು ನೀವೆಲ್ಲ
ಕರದಿ ಸ್ಪರ್ಶಿಸಿ ನೋಡಿ !
ಮರೆತಿಲ್ಲ ಮಗುವಿನ್ನು ತನ್ನ ನಗೆಯು.
ಈ ಮುದ್ದು ಕುವರನಿಗೆ
ಯಾ ಮರಣ ಬರಬಹುದು ?
ಆ ಮರಣ ಕದಡಿಸಿಹುದೆನ್ನ ಬಗೆಯು !"

"ಸತಿಯನುಳುಹಿಸಿಕೊಳಲು
ಸುತನ ಬಿಸುಟಿದ ಪತಿಯೆ !
ಇದು ಯಾವ ನಗೆಗೇಡು ! ಎಂಥ ಕೇಡು !
ನಿಮ್ಮ ಮನೆ ತೊರೆದೆನಿದೊ !
ಎತ್ತಿಕೊಂಡೆಸು ಮಗುವ;
ನಿಮ್ಮ ನಟನೆಯ ಕೋಪಕಿದುವೆ ಸೇಡು !

ಮಲಗಿತೇಕೀ ಕೂಸು ?
ಅಲುಗಿರಲಿ ಇನ್ನೀಸು;
ಕಾಲಂದುಗೆಯು ಇಲ್ಲದಿದ್ದ ಕೂಸು !
ನಸಗಿರಲಿ–ಇನ್ನೀಸು
ದಿನವಿರಲಿ ಈ ಸೊಗಸು !
ಕೂಸಿರಲು ಇನ್ನೇಕೆ ಹಾಸು ಬೀಸು !"

"ತೋಳೆ ತೊಟ್ಟಿಲವೆಂದೆ;
ಅದಕೆ ಮಲಗಿದೆ ಜಾಣ !
ತೋಳೆ ಕೈತಾಳವಿದೆ. ಎದ್ದು ಕೇಳು !
ಮೊಲೆದುಂಬಿರುವ ಹಾಲು
ನಿನಗಾಗಿ ಸುರಿಯುತಿದೆ;
ಅಲ್ಲ ! ಹೊಯ್ಲಾಲಲ್ಲ ! ಎದ್ದು ಏಳು !"

"ಇನ್ನು ನಿದ್ದೆಯೊಳಿಹನು;
ಬನ್ನಗೊಳಿಸಲು ಬೇಕು
ಚೆನ್ನಿಗನ; ಅಂದರೆಚ್ಚರಗೊಳುವನು !
ಮರದ ರೆಂಬೆಯಲಿರಿಸಿ
ಅರಿಯದೊಲು ಸಾಗಿದರೆ
ಮರುಚಣವೆ ಅರಮರವು ಮುಗಿದಳುವನು !"

"ಇದೊ ! ಹರಿದೆ ಸೀರೆಯನು !
ಕೊಂಬೆಗಿದ ಕಟ್ಟುವೆನು-
ಎದೆಯ ಮಾಣಿಕ್ಯವನು, ಕರುಳ ಸೊದೆಯು ;
ಕೊಂಬೆಗಳ ಗೂಡಿನಲಿ
ಇಂಬಾಗಿ ಇರಿಸಿಹೆನು;
ನಂಬುವಿಯೊ ಇಲ್ಲವೋ ಈ ಪ್ರಮದೆಯು ?"

"ಹುಚ್ಚೆದ್ದು ಕಿತ್ತೋಡಿ
ಕಚ್ಚಿ ತುಟಿಯಲಿ ತುಟಿಯ
ಮುಚ್ಚು ಮರೆಯಿಲ್ಲದಲೆ ಮುತ್ತಿಡುವೆನು.
ಬಚ್ಚಿಟ್ಟು ಎದೆಯಲಿದೆ,
ಅಚ್ಚೊತ್ತಿ ಮೊಗದಿ ಮೊಗ,
ಎಚ್ಚರಿಯೆ ಕತ್ತಿನಲಿ ಕತ್ತಿಡುವೆನು."

ಹೀಗಂದು ಸಾಗಿದಳು
ಮಗುವಿರಿಸಿ ಮರದಲ್ಲಿ
ಮರುಳಿ ಬರಬೇಕೆಂದು ಕರೆಯಲೊಡನೆ !
ಶವದ ಕರೆ ಕೇಳಿಸದು;
ಶವ ಕೂಡ ಕಾಣಿಸದು,-
ಮರುಮರುಳಿ ನೋಡುತಿರೆ ಮ್ಲಾನವದನೆ !

ಓಡಿ ಬಂದಳು ತಿರುಗಿ.
ನೋಡಿದರೆ ಮಗುವಿಲ್ಲ !
ಹಾಡಿಕೊಂಡಳುತಿದ್ದಳಾಕೆ ವಸದಿ.

ಇಸಿಪಾದ ದನಿಯೊಂದು
ಮರದಲ್ಲಿ ಕೇಳಿ ಬರೆ
ನವ ಶಾಂತಿಯಂಕುರಿಸಿತವಳ ಮನದಿ !

೨

"ಮರದ ಒಳಮೆಯ್ಯಿಂದ ಬಂದ ಊರವವು
ಭೈರವನ ನಾಟ್ಯವಲ್ಲ.
ನನ್ನ ಪ್ರಾಣದ ಗಿಳಿಯು ಅಲ್ಲಿಂದ ನುಡಿಯುತಿರೆ
ಅದು ಏನು ಚೋದ್ಯವಲ್ಲ."

"ಕನ್ನವುರವನು ನುಂಗಿ ಕಿವಿಯೆ ಹೊನ್ನಾದಂತೆ
ತರುವಿಗರೆ ಬಸಿರು ಬಯಕೆ,
ನನ್ನ ಹಸುಳನ ಧರಿಸಿ ಶ್ರೀಮಂತವಾಗಿಹುದು:
ಹಸಿರೆ ತಳಿರುಡಿಗೆಯದಕೆ."

"ಕೇಳಿದೇನಚ್ಚರಿಯು ! ಎಲೆ ಎಲೆಯು ಕರೆಯುತಿದೆ
'ಎಲೆಲೆ ! ತಾಯೆ ! ನಿಲ್ಲು ! ನಿಲ್ಲು !
ನೀ ಕೂರ್ತ ತಳಿರಾಗಿ ಭಳಿರೆಂದು ಬರುತಿಹೆನು ?'
ಇದು ನನ್ನ ಕೂಸ ಸೊಲ್ಲು !"

"ಪ್ರಾಸಕನು ಪ್ರಾಸವಿರುವಂತೆ ಕೂಸದು, ತಾಯೆ !
ಗಳಿಗೆಯಾಟವು ಎಂದಿಗೂ !
ಬೀಜಮಂತ್ರಾಕ್ಷರದ ತೆರದಿ ಈ ತಳಿರಾಟ
ಹೊಸತಿಹುದು ಎಂದೆಂದಿಗೂ !"

"ಎಲೆ ಎಲೆಯು ನಗುತಿಹುದು; ಎಲೆ ಎಲೆಯು ಅಳುತಿಹುದು:–
ನನ್ನಣುಗನಳುವು ನಗುವು.
ಅಹಹ ! ಚೇತನೆಗೊಂಡು ಮತ್ತೆ ಧಾವಿಸಿ ಬಂತೊ
ನನ್ನ ತಾಯ್ತನದ ಸೊಗವು !"

೩

"ಉದ್ಧರಿಸಿ ಉದ್ಧಾರವಾಗುವಂತಹ ಮಹಿಮೆ
ಬಂತು ನಿನಗೆನ್ನ ಮಗು, ವಿದ್ಯಾಧರಾ !
ಇದ್ದೊಬ್ಬ ಕುವರನನು ಕಳಕೊಂಡ ಹಳವಂಡ
ಬಯಲಾಯ್ತು ನಿನ್ನ ಬರವಿಗೆ ಸೋದರಾ !"

"ಪರ್ಣೋಪಪರ್ಣವದು ಗಾನ ಹೊರಹೊಮ್ಮುತಿರೆ
ಕರ್ಣೋಪಕರ್ಣವಾಗಿರದೆ ತಾನು ?
ನೂರೊಂದು ಗಿಳಿವಿಂಡು, ಕೋಕಿಲದ ಎಳೆವಿಂಡು,–
ಇವನೆಲ್ಲ ಮೇಲ್ಗಟ್ಟಿ ಬಾರದೇನು ?"

"ಎಲೆಯ ಹಿಂದಕೆ ನಕ್ಕು ಮುಂದೆ ಹೆಜ್ಜೆಯನಿಕ್ಕು;
ಮೊಗ್ಗೆಯೆದೆಯಾಗುತ್ತ ಮೊಗವ ತೋರು !
ಸುಮನೋವಿಕಾಸದಲಿ ಮೃದುಹಾಸ ಸಿಕ್ಕಿರಲಿ;
ಸುಗ್ಗಿಯೆದೆನಾಡಿಸಲಿ ಕಂಪು ಬೀರು !"

"ಮನಸಿಜ–ವಸಂತರನು ಗೆಳೆಯರನು ಮಾಡಿಕೊಳು;
ನಿನ್ನ ಮುದ್ದುಗಳೆಲ್ಲ ಮಧುರವಿರಲಿ.
ಬನದೇವಿಯರ ಕಂಡು ಮನ್ನಣೆಯನಿತ್ತು ಬಾ;
ನಿನ್ನ ಮಾತುಗಳೆಲ್ಲ ಚೆದುರವಿರಲಿ !"

"ಈ ಹೆಮ್ಮರವ ಕಿತ್ತು ಮನೆಯ ತೋಟದಲಿಟ್ಟು
ದಿನವು ದಸಿಯಾಲಿಸುತ ನಲಿಯಲೇನೆ ?
ಅವರಿಗೀ ಪಾರಿಜಾತದ ಕತೆಯನುಸುರುತ್ತ
ಸವಿಯುರೊಡನೆಯೆ ಕಾಲ ಕಳೆಯಲೇನೆ ?"

"ಮರವು ಒಲ್ಲೆನ್ನುತಿದೆ; ಎಲೆಗಳನು ಕಂಪಿಸುತ
ಬಂಡನೆಬ್ಬಿಸುವಂತೆ ರೋದಿಸುವವು.
ಗಾಳಿಪಂಡಿತನಲ್ಲಿ ಕಲಿತು ಬಂದವರಂತೆ
ಮತ್ತೆ ಹಲಕೆಲವೆನ್ನು ವಾದಿಸುವವು."

"ಎಲ್ಲೆ ಸುತನಲ್ಲಿ ಮನೆ; ಲತೆಯಂತೆ ಬೆಳೆದಿಲ್ಲಿ
ನಿಲ್ಲಬಹುದಿರಲೀರ್ವರೊಂದೆ ಗುಟ್ಟು.
ಅವನ ಹೂಗಣೆಗೆನ್ನ ಕುಸುಮಗಳ ಮೊನೆ ಮಾಡಿ
ಹೂವ ತಲೆದುಡಿಗೆಯಲಿ ಕೈಯ್ಯನಿಟ್ಟು."

" 'ಆ' ಎಂದು 'ಊ' ಎಂದು ಮರವಂದು ಎಲೆಯಂದು
ನೆಲಗಾಳಿಯಂದಂದು ಇರಲು ದುಂದು,–
'ಮಗುವೆ! ಜೋ! ಜೋ!' ಎಂದು ಬಾಯಂದು ಮೆಯ್ಯಂದು
ತೆರಳಬಹುದಮ್ಮಯ್ಯ ! ಜೀವವಂದು !,

೪

ಎನಿತೊ ದಿನಗಳು ಬಂದು
ವನವಾಸ ಕಳೆದಿಹವು.
ಬನದಲಿಹಳಾ ತಾಯಿ ಸುತನ ಬಳಿಗೆ.

ಮಲ್ಲಿಗೆಯ ಮೆಯ್ಯವಳು
ಎಲ್ಲೆಯರಿತಿಹ ಸೆರಗ
ಮೆಲ್ಲನಿರಿಸುತ ನಡುಗದಿಹಳು ಚಳಿಗೆ !

ಪತಿ ಬಂದು ಯಾಚಿಸಿದ;
ಊರರಸ ಸೂಚಿಸಿದ;
ನೆರೆದ ಯೋಷಿತೆಯರತಿ ಯೋಚಿಸಿದರು.
ಮರವನೀಪರಿ ನೋಡಿ
ಏನು ಪಡೆದಿಹಳೇನೊ !
ಊರವರು ಬಂದು ಆಲೋಚಿಸಿದರು.

ಮೆಲ್ಲನೆಂದಳು ತಾಯಿ:
"ಇಲ್ಲಿಹುದು ಸ್ವನಿವಾಸ;
ಇಲ್ಲಿಹುದು ನನ್ನೆದೆಯು ತೆರೆದ ನಾಡು.
ಹುಚ್ಚಲ್ಲ, ಕಿಚ್ಚಲ್ಲ,
ಹೆಚ್ಚೇನು ಹೇಳುವದು ?
ನೆಚ್ಚುವದು. ದೇಶಕಿಲ್ಲಾವ ಕೇಡು."

"ಕಂದಮೂಲಗಳನ್ನು
ತಿಂದು ತೇಗುವೆನಿಲ್ಲಿ.
ಮಂದಿ ತಂದಿಹುದನೇನೆಂದು ತಿಂಬೆ ?
ಋತುವಿಗೊಂದೆಲೆಯಂತೆ
ಬಡಿಸಿ ತಂದಿಡಬಹುದು;
ಅದು ನಿಮ್ಮ ಮಮತೆಯ ಪ್ರಸಾದವೆಂಬೆ !"

ವಂದಿಸುತ ಕಳುಹಿದಳು
ಗಂಡನನು, ಹಿರಿಯರನು
ಉಂಡುಟ್ಟು ಬಾಳ್ವುದೆನೆ ಬಿನ್ನವಿಸುತ;
ಊರವರ ಬೀಳ್ಕೊಂಡು
ಏರಿ ಬಹ ಪ್ರೀತಿಯನು
ತೋರುತ್ತ ಕಂಗಳಲಿ, ಸಂತವಿಸುತ :

ಬಾಳಿದಳು ಮಾತಾಯಿ;
ಆಳಿದಳು ಬಸವನ್ನು;
ಆಳಿದಳು ಜನತೆಯಾ ಸುಮನಸವನ್ನು !

ಆ ಮರದ ಬದಿಗೊಮ್ಮೆ
ಸುಳಿದೆಯಾದೊಡೆ, ಪಥಿಕ !
ಹೇ ! ದೇವಿ ! ನಿನಗೊಂದು ನಮನವೆನ್ನು !

೫

ಪಾರಿಜಾತದಡಿಯಲಿ
ಇಹುದದೋ ಸಮಾಧಿಯು !
ಅಲ್ಲಿ ಹೋಗಿ ತಿಳಿಯಲು
ಇಹುದೆ ನಿನಗೆ ಅವಧಿಯು ?

ಅಲ್ಲಿ ಹಕ್ಕಿ ನುಡಿವುವು
ಕುಳಿತು ಮರದ ಕೊಂಬೆಗೆ;
ಗಾನ ಮುಡುಪಿದೆನುವವು
ನಮ್ಮ ನಾಡಿನಂಬೆಗೆ.

ಅಲ್ಲಿ ಪಾರಿಜಾತವು
ಸುರಿಸಿ ಸುಮನವೃಷ್ಟಿಯ,
ನುಡಿವುದಿಲ್ಲಿ ಫಲಿಸಿತು
ಫಲವು ದಿವ್ಯ ದೃಷ್ಟಿಯ.

ಅಲ್ಲಿ ಮಲ್ಲಿಕಾಲತೆ
ತಳಿರಗುಡಿಯನೇರಿಸಿ
ಸುತ್ತುತಿಹುದು ಮರವನು
ತನ್ನ ಮುಗುಳನರಳಿಸಿ.

ಒಯ್ಯ್ಯನಲ್ಲಿ ಸುಳಿಯುವ
ಗಂಧವಹರು ಆಡುತ
ಕಂಡು ಆ ಸುಗಂಧಿಯ
ನಿಂತೆ ಇಹರು ನೋಡುತ.

ಅಲ್ಲಿ ಸೂರ್ಯ ಚಂದ್ರರು
ತಮ್ಮ ನಿತ್ಯ ಯಾತ್ರೆಯ
ನಿಲ್ಲಿಸುತ್ತ ಕಾಣ್ಬರು
ದಿನವು ಆ ಪವಿತ್ರೆಯ !

ಪಾರಿಜಾತದಡಿಯಲಿ
ಇಹುದದೋ ! ಸಮಾಧಿಯು.
ಅಲ್ಲಿ ಹೋಗಿ ತಿಳಿಯಲು
ಇಹುದೆ ನಿನಗೆ ಅವಧಿಯು ?

ಜಾನುವರಿ ೧೯೩೪